# ಹಿಂದೂ-ಮುಸಲ್ಮಾನರ ಐಕ್ಯ

[ಒಂದು ಐತಿಹಾಸಿಕ ಪ್ರಸಂಗ]



ಲೇಖಕ-ಮುದ್ರಕ-ಪ್ರಕಾಶಕ:

ಬಿ. ಪಿ. ಕಾಳೆ,

ಶ್ರೀ ಶೇಷಾಚಲ ಪ್ರೆಸ್ಸ, ಧಾರವಾಡ.



(೩ನೇ ಆವೃತ್ತಿ)

೧೯೫೩

೪ ಆಣೆ

## ನಮ್ಮ ಐತಿಹಾಸಿಕ ಪುಸ್ತಕಗಳು



| ಪುಸ್ತಕದ ಹೆಸರು | ಲೇಖಕ | ಬೆಲೆ—ರೂ | ಆ |
|---|---|---|---|
| ಅಡಮುಟ್ಟ ಸಿಪಾಯಿ | ಕಾಳೆ | ೦ | ೬ |
| ಅಮಾತ್ಯ ರಾಕ್ಷಸ | ನಾಗೇಶ | ೦ | ೮ |
| ಊರ್ಮಿಳೆ | ನಾಗೇಶ | ೨ | ೦ |
| ಕಂಕಣ ಚೋರ | ಕಾಳೆ | ೩ | ೦ |
| ಕಲಿಂಗ ವಿಜಯ | ,, | ೨ | ೮ |
| ಕುಣಕಾವ್ಯ | ,, | ೨ | ೦ |
| ದಳವಾಯಿ ಸಾತನಾಮಿ | ಅಂಗಿರಸ | ೦ | ೪ |
| ನೇತಾಜಿ | ಕಾಳೆ | ೧ | ೪ |
| ಪತಿತೋದ್ಧರಣ | ನಾಗೇಶ | ೦ | ೪ |
| ಪ್ರಾರಬ್ಧ ಪ್ರಹಾರ | ,, | ೦ | ೯ |
| ಪ್ರಾಣದಾನ | ಬಿಕ್ಕಿ | ೦ | ೬ |
| ಪ್ಲಾಸೀ ಕದನ | ಅಚ್ಯುತರಾವ | ೦ | ೬ |
| ಮ್ಯಾಝಿನಿ-ಸಾವರಕರ | ಕಾಳೆ | ೧ | ೦ |
| ಮಂದಾಕಿನಿ | ಕರ್ಜಗಿ | ೨ | ೦ |
| ರಕ್ತ ಸಿಂಚನ | ನಾಗೇಶ | ೦ | ೪ |
| *ವಡಗಾಂವದ ವಿಜಯ | ಕಾಳೆ | ೨ | ೦ |
| ವೀರರಾಜ ವಿಜಯ | ಕೃಷ್ಣಯ್ಯ | ೦ | ೧೨ |
| ಶಕ್ತಿಮಯಿ | ಕಾಳೆ | ೧ | ೯ |
| ಸಿರಾಜ ಉದ್ದಾಲ | ನಾಗೇಶ | ೧ | ೮ |
| *ಸ್ವಾಧೀನ ಜೀವನ | ಭಾರತ ಸುತ | ೩ | ೮ |
| ಸೂರ್ಯಾಸ್ತ | ನಾಗೇಶ | ೦ | ೧೨ |
| *ಸೂರ್ಯಗ್ರಹಣ | ಅಮೀನಭಾವಿ | ೧ | ೮ |
| ಹಿಂದೂ-ಮುಸಲ್ಮಾನರ ಐಕ್ಯ | ಕಾಳೆ | ೦ | ೪ |

**ಬಿ. ಪಿ. ಕಾಳೆ, ಮದಿಹಾಳ-ಧಾರವಾಡ**

# ಹಿಂದೂ-ಮುಸಲ್ಮಾನರ ಐಕ್ಯ

[ಒಂದು ಐತಿಹಾಸಿಕ ಪ್ರಸಂಗ]

ಇಳಿ ಹೊತ್ತಿನ ಸಮಯ. ಶಿವದಾಸನು ಚಂಡಿಮಂಟಪದ ಮುಮ್ಮಗ್ಗಲಿನ ಭಾವಣಿಯಲ್ಲಿ ಕುಳಿತು ಎಂಥದೋ ವೇದಾಂತ ಗ್ರಂಥವನ್ನು ಏಕಾಗ್ರ ಚಿತ್ತದಿಂದ ಪಠಣಮಾಡುತಲಿದ್ದನು. ದೇವಾಲಯದ ಪಟಾಂಗಣದಲ್ಲಿ ಪ್ರೌಢ ವಯಸ್ಸಿನ ಓರ್ವ ಮುಸಲ್ಮಾನನು ನಿಂತುಕೊಂಡು ಶಿವದಾಸನ ಕಡೆಗೆ ಟಕಮಕವೆಂದು ನೋಡುತ್ತ ಮುಗುಳು ನಗೆ ನಗುತ್ತಿದ್ದ. ಆ ಯವನನ ಸೌಮ್ಯ ಶಾಂತ, ಸರಲ ಮತ್ತು ಪ್ರಫುಲ್ಲಿತ ನಗುಮೊಗವನ್ನು ನೋಡಿದರೆ, ಆತನು ನಿಷ್ಕಪಟ ಹೃದಯದ, ಧೀರೋದಾತ್ತ ಪ್ರಕೃತಿಯ ಪುರುಷಶ್ರೇಷ್ಠನೆಂದು ಪ್ರತಿಯೊಬ್ಬರೂ ತಟ್ಟನೆ ಭಾವಿಸಬಹುದಾಗಿತ್ತು. ಅವನನ್ನು ಕಂಡ ಯಾವನೊಬ್ಬ ಅಪರಿಚಿತನ ಅಂತರಂಗದಲ್ಲಿಯೂ ಕೂಡ ಅವನ ವಿಷಯಕ ಶ್ರದ್ಧೆಯುಂಟಾಗಿ, ಅದರಿಂದ ಅವನು ಆ ಮಹಾ ಪುರುಷನನ್ನು ಸನ್ಮಾನಿಸಬಹುದಿತ್ತು. ಆ ಯವನನ ವೇಷ-ಭೂಷಣಗಳಲ್ಲಿ ಐಶ್ವರ್ಯಾಧಿಕಾರಗಳ ಆಡಂಬರವೇನೂ ಕಂಡು ಬರುತ್ತಿರಲಿಲ್ಲ; ಆದರೆ ಅತನ ಸುಂದರ ಹಾಗು ಅಚ್ಚುಕಟ್ಟಾದ ಉಡಿಗೆ-ತೊಡಿಗೆಗಳಿಂದ ಅವನು ಯಾವನೊಬ್ಬ ಮಾನನೀಯ ಪುರುಷನೆಂಬದು ಮಾತ್ರ ಸಹಜವಾಗಿ ತೋರಿಬರುತ್ತಿತ್ತು. ಲೋಕದೊಳಗಿನ ಕೆಲವು ಜನ ಲೋಕಮಾನ್ಯರ ಮಾನ್ಯವಂತಿಕೆಯನ್ನು ಯಾವ ಶಬ್ದಾಡಂಬರದಿಂದಲೂ ಸಿದ್ಧಪಡಿಸಹೋಗುವ ಕಾರಣ ಬೀಳುವದಿಲ್ಲ. ಅವರ ಆಕೃತಿ, ಮುಖ ಭಾವ, ಉಡಿಗೆ-ತೊಡಿಗೆ ಧರಿಸುವ ರೀತಿ ಇವೆಲ್ಲವುಗಳಿಂದ ಅವರಲ್ಲಿಯ ಮಹಾಪುರುಷ ಲಕ್ಷಣವು ನೋಡುವವರ ಕಣ್ಣೆದುರಿಗೆ ಒಮ್ಮೆಲೆ 'ಮೈವೆತ್ತಿ'ಂದು ಬಂದು ನಿಲ್ಲುತ್ತದೆ. ಸರ್ವಶ್ರೇಷ್ಠನಾದ ಸೂರ್ಯನನ್ನು ಜಗತ್ತಿನಲ್ಲಿಯ ಬೇರೆ ಬೇರೆ ವ್ಯಕ್ತಿಗಳು ಆದರ-ಅನಾದರ, ಪ್ರೇಮ-ತಿರಸ್ಕಾರ ಮೊದಲಾದ ಆಂತರಿಕ ವಿಕಾರಗಳಿಂದ ಹೇಗಾದರೂ ಮನ್ನಿಸಿಯೇ ತೀರಬೇಕಾಗು

ತ್ತದೆ; ಆದರೆ ಲೋಕಮಾನ್ಯ ವ್ಯಕ್ತಿಯನ್ನು ಮಾತ್ರ ಲೋಕದವರೆಲ್ಲರೂ ನಿಜವಾದ ಅಂತಃಕರಣದಿಂದ ಸಹಜವಾಗಿ ಪ್ರೀತಿಸಿ, ಮನ್ನಿಸುತ್ತಿರುತ್ತಾರೆ. ಅಧ್ಯಯನನಿರತನಾದ ಆ ಬ್ರಾಹ್ಮಣನ ಸಮ್ಮುಖದಲ್ಲಿ ಮಧುರಸ್ಮಿತವದನ ದಿಂದ ಸ್ತಬ್ಧವಾಗಿ ನಿಂತುಕೊಂಡಿದ್ದ ಆ ನಮ್ಮ ಪ್ರೌಢವಯಸ್ಸಿನವನಾದರೂ ಅಂಥ ಶ್ರೇಷ್ಠ ಕೋಟಿಯೊಳಗಿನವನೇ ಆಗಿದ್ದನು!

ಆ ಲೋಕಮಾನ್ಯ ಯುವನನು ಹಾಗೆಯೇ ಎಷ್ಟೋ ಹೊತ್ತಿನ ವರೆಗೆ ಸುಮ್ಮನೆ ನಿಂತುಕೊಂಡಿದ್ದನು. ನಂತರ ಅವನು ಆ ಬ್ರಾಹ್ಮಣನನ್ನು ಕುರಿತು "ಬ್ರಾಹ್ಮಣೋತ್ತಮರೇ, ಗ್ರಂಥಪಠಣವಿನ್ನೂ ಪೂರೈಸಲಿಲ್ಲೇನು? ವ್ಯಾಸ ಕೃತ ಅಷ್ಟಾದಶ ಪುರಾಣಗಳೊಳಗಿನ ಯಾವ ಮಹತ್ವದ ಭಾಗವನ್ನು ಮನನ ಮಾಡುವದರಲ್ಲಿ ನೀವಿಷ್ಟು ತಲ್ಲೀನರಾಗುತ್ತೀರಿ?" ಎಂದು ಪ್ರಶ್ನೆ ಮಾಡಿದನು.

"ಬನ್ನಿರಿ; ಜಹಗೀರದಾರರೇ, ಇತ್ತ ಬಂದು ಬಿಡಿರಿ. ಅಯ್ಯೋ! ತಾವು ಬಂದು ಎಷ್ಟೊತ್ತಾಗಿದೆಯೋ ದೇವರೇ ಬಲ್ಲ! ತಾವು ಬಂದೊಡನೆಯೇ ನನ್ನ ನ್ನೇಕೆ ಕೂಗಲಿಲ್ಲ?........" ಎಂದಂದು, ಆಸನಬಿಟ್ಟು ಎದ್ದು ನಿಂತ ಶಿವದಾ ಸನು ತನ್ನ ಶಿಷ್ಯನನ್ನು ಕುರಿತು:-"ಎಲೋ ನಾರಾಯಣ ದೀಕ್ಷಿತಾ, ಎಲೋ ನಾರಾಯಣ," ಎಂದು ಎರಡು-ಮೂರು ಸಾರೆ ಕೂಗಿಕೊಂಡರೂ, ಎದುರಿಗೇ ಟೊಣಪನ ಹಾಗೆ ನಿಂತುಕೊಂಡಿದ್ದ ಅವರ ಆ ಪ್ರಿಯಶಿಷ್ಯನು 'ಓ' ಕೂಡ ಅನ್ನದ್ದರಿಂದ, ಶಿವದಾಸನು ಪರಕ್ಷಣದಲ್ಲಿ ಏನೋ ಜ್ಞಾಪಿಸಿಕೊಂಡು, ಪುನಃ-" ಏ ನಾರ್‍ಯಾ, ಎಲೋ ಟೊಣಪ ನಾರ್‍ಯಾ" ಎಂದು ಕೂಗಲು, ಸ್ಮಿತ ವದನನಾದ ನಾರಾಯಣದೀಕ್ಷಿತನು ನಿದ್ರಾಸಕ್ತವಾದ ಜಾತೀ ನಾಯಿಯು ಒಡೆಯನ ಶಿಳ್ಳಿನ ದನಿಯನ್ನು ಗೇನಿಸಿ ಎದ್ದು ಚಟಪಟನೆ ಕಿವಿಜಾಡಿಸಿ ಕೊಳ್ಳುತ್ತ ಪಾಲಕನನ್ನು ಬಂದು ಸೇರುವಂತೆ ನಾರಾಯಣನು ಕಿವಿ ಜಾಡಿಸಿ ಕೊಳ್ಳುತ್ತ ತ್ವರಿತಗತಿಯಿಂದ ಬಂದು ಗುರುಗಳ ಬಳಿಯಲ್ಲಿ ನಿಂತನು.

ನಾರಾಯಣ ದೀಕ್ಷಿತನು ಹುಟ್ಟಾ ಬಂಡೆಗಲ್ಲು! ವಿದ್ಯೆಯಲ್ಲಿ ಅವನಿಗೆ ಆಸಕ್ತಿಯಿರಲಿಲ್ಲ; ಆದರೆ ತಾಯಿ-ತಂದೆಗಳ, ಅವರ ಪಶ್ಚಾತ್ ಕಠೋರನಾದ ಅಣ್ಣನ ಕಾಟಕ್ಕಾಗಿ ಅವನು ಶಿವದಾಸರ ಬಳಿಯಲ್ಲಿ ಓದಲಿಕ್ಕೆಂದು ಬಂದಿದ್ದನು. ಶಿವದಾಸರಿಗಾದರೂ ನಾರಾಯಣನ ತೈಲಬುದ್ಧಿಯು ಮುಟ್ಟಿ ತಿಳಿದಿದ್ದಿಲ್ಲೆಂತಲ್ಲ; ಆದರೆ ಮನೆಮುಟ್ಟಿ ಬಂದ ಕಾಡಕೋಣನಂತಹ ಕೊಬ್ಬಿದ ಶಿಷ್ಯನನ್ನು ಪಾಠ ಪ್ರವಚನಗಳಲ್ಲಿ ನಿರತನನ್ನಾಗ ಮಾಡಬರದಿದ್ದರೂ, ಮನೆಯ ತರ-ಬರುವ

ಕೆಲಸಗಳಿಗಾದರೂ ಉಪಯೋಗಿಸಿಕೊಳ್ಳಬಹುದೆಂದು ಯೋಚಿಸಿ ಶಿವದಾಸರು ಅವನಿಗೆ ತಮ್ಮ ಬಿಡಾರದಲ್ಲಿ ಆಶ್ರಯ ಕೊಟ್ಟಿದ್ದರು. ನಾರಾಯಣನ ಹಿಂದಿನ ಎಷ್ಟೋ ತಲೆಯ ಪೂರ್ವಜರು ಯಾವದೊಂದು ಯಾಗ ಮಾಡಬೇಕೆಂದು ಭಾವಿಕರಾದ ಜನರಿಂದ ದುಡ್ಡನ್ನೆತ್ತಿದ್ದರು; ಆದರೆ ಆ ಮಹಾಪುರುಷರು ಸುಲಭವಾಗಿ ದೊರೆತ ಆ ಹಣದಿಂದ ಯಾಗವನ್ನಂತೂ ಮಾಡಲೇ ಇಲ್ಲ; ಅದರಿಂದ ಅನೇಕ ಹೊಲ್ಲದ ಕೃತಿಗಳನ್ನು ಮಾತ್ರ ಮಾಡಿದ್ದರು. ಆದರೂ ಜನರು ಯಾಗಕ್ಕಾಗಿ ದೇಶಾವರಿ ಕೇಳಬಂದಿದ್ದ ಆ ಧೂರ್ತ ಮನುಷ್ಯನಿಗೆ ಯಾಗ ಮಾಡುವ ಮೊದಲೇ 'ದೀಕ್ಷಿತ' ಎಂಬ ಅನ್ವರ್ಥಕ ನಾಮದಿಂದ ಸಂಬೋಧಿಸಹತ್ತಿದ್ದರು! ಆ ಅಡ್ಡಹೆಸರು ಎಷ್ಟೋ ತಲೆಗಳಾದರೂ ಕೊಂಚವೂ ಚ್ಯುತಿಯಿಲ್ಲದೆ ನಾರಾಯಣದೀಕ್ಷಿತನ ಮನೆಯವರಿಗೆ ನಡೆಯುತ್ತ ಬಂದಿತ್ತು.

ನಾರಾಯಣನು ಸ್ವಭಾವತಃ ಒಳ್ಳೇ ಹುಡುಗ; ಆದರೆ ಸೂಕ್ಷ್ಮತನವೆಂಬುದನ್ನು ಮಾತ್ರ ಅವನು ಅರಿಯನೇ ಅರಿಯ! ಸದಾ ಮುಠ್ಠಾಳ ಕೃತಿಗಳನ್ನು ಮಾಡುವದೇ ಅವನ ದೇಹಸ್ಥಿತ ಲಕ್ಷಣವಾಗಿತ್ತು. ಅವನ ಈ ಎಲ್ಲ ನಿತ್ಯವ್ಯವಹಾರದ ಸಲುವಾಗಿಯೇ ಅವನನ್ನು ಎಲ್ಲರೂ ತಿರಸ್ಕರಿಸುತ್ತಿದ್ದರು. ತನ್ನನ್ನು ಪ್ರೀತಿಸುವವರಿಗಿಂತ ಸದಾ ತಿರಸ್ಕರಿಸುವವರೇ ತನ್ನ ನಿಜವಾದ ಹಿತಕರ್ತೃಗಳೆಂದು ಆ ಅಭಿನವ ಹುಡುಗನ ತಿಳುವಳಿಕೆಯಾಗಿತ್ತು. "ನಾರಾಯಣ ದೀಕ್ಷಿತ, ನಾರಾಯಣ" ಎಂದು ಹುಟ್ಟಿದಂದಿನಿಂದ ಅವನನ್ನು ಯಾರೂ ಸಂಬೋಧಿಸಿದ್ದಿಲ್ಲ. ಅದರಿಂದ ಶಿವದಾಸರು ಇಂದು ಆ ಹೆಸರುಗಳಿಂದ ಕರೆಯುತ್ತಿರಲು, ಆ ಹೆಸರಿನವರು ಬೇರೆ ಯಾರಾದರೂ ಇರಬಹುದೆಂದು ತಿಳಿದು ಆ ಟೊಣಪನು ಗುರುಗಳ ಹತ್ತರವೇ ಇದ್ದರೂ ಓ ಕೊಟ್ಟಿದ್ದಿಲ್ಲ.

ಶಿವದಾಸರಿಗೆ ನಾರಾಯಣನ ದೇಹಸ್ಥಿತಿಯು ಚೆನ್ನಾಗಿಗೊತ್ತಾಗಿತ್ತು; ಆದರೆ ಅತಿಥಿಯಾಗಿ ಬಂದ ಒಬ್ಬ ಸನ್ಮಾನ್ಯ ಗೃಹಸ್ಥನೆದುರಿಗೆ ತನ್ನ ಪ್ರಿಯ ಶಿಷ್ಯನನ್ನಾದರೂ ಸನ್ಮಾನಪೂರ್ವಕವಾಗಿಯೇ ಬರಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ ಅವರು ನಾರ್ಯಾನನ್ನು "ನಾರಾಯಣದೀಕ್ಷಿತ" "ನಾರಾಯಣಾ" ಎಂದು ಸಂಬೋಧಿಸಿ ಕೂಗಿದರೂ. ತಮ್ಮ ಪ್ರಯತ್ನದ ದುರುಪಯೋಗವಾಗುವ ಚಿಹ್ನಗಳು ತೋರಿಬರಲು, ಸ್ವಕಾರ್ಯ ಸಾಧನೆಗಾಗಿ ಕಡೆಗೆ ಅವರು ತಮ್ಮ ಶಿಷ್ಯನ ನಿಜಸ್ಥಿತಿಯನ್ನು ಬೈಲಿಗಿಡುವದಕ್ಕಾಗಿ ಅವನ ರೂಢನಾಮವಾಗಿದ್ದ 'ನಾರ್ಯಾ' ಎಂಬ ಹೆಸರಿನಿಂದಲೇ ಆತನನ್ನು ಕರೆದರು.

'ಓ' ಅನ್ನುತ್ತಲೆ ಶಿವದಾಸರು ತಮ್ಮ ಸಮ್ಮುಖದಲ್ಲಿಯೇ ಗುಲಾಮ್ ಅಲಿ ಸಾಹೇಬರಿಗಾಗಿ ನಾರ್ಯಾನಿಗೆ ಬೇರೊಂದ ಆಸನವನ್ನು ಮಂಡಿಸ ಹೇಳಿದರು. ನಾರಾಯಣನು ಚಟುವಟಿಕೆಯಿಂದ ಆಸನ ತರಹೋದನು.

'ಬೇಡ-ಬೇಡ, ಬ್ರಾಹ್ಮಣೋತ್ತಮರೆ, ಆಸನ-ಗೀಸನಗಳ ಅವಶ್ಯಕತೆಯೇತಕ್ಕೆ? ನೀವು ಕುಳಿತುಕೊಳ್ಳಿರಿ. ನಾನು ತುಸ ಹೊತ್ತು ನಿಂತುಕೊಂಡರೆ ತಪ್ಪೇನು? ಇದರಿಂದ ನನಗೆ ಶ್ರಮವಾಗುವದೆಂದು ತಮ್ಮ ತಿಳುವಳಿಕೆಯಾಗಿದೆಯೇ? ಹೀಗೆ ಎಷ್ಟೋ ಪ್ರಹರಗಳ ವರೆಗೆ ಸತತ ನಿಂತುಕೊಂಡಿರುವ ಅಭ್ಯಾಸ ನನಗೆ ಚನ್ನಾಗಿ ಆಗಿರುತ್ತದೆ ; ಯಾಕಂದರೆ, ನಾನು ದಂಡಿನಲ್ಲಿ ಘುರಿತವನೆಂಬದು ನಿಮಗೆ ತಿಳಿಯದೇ? ನಬಾಬನ ಹುಕುಮಾದರೆ, ಆಗಿಂದಾಗಲೆ ಯೋಜನಗಟ್ಲೆ ಒಂದೇಸವನೆ ಓಡುತ್ತ ಹೋಗಬೇಕಾಗುತ್ತದೆ, ಹಾಗೆ ಓಡುವಾಗ ರಾತ್ರಿಯು ದಟ್ಟವಾದ ಅಂಧಃಕಾರವಿದ್ದರೂ, ನಡುವೆ ನದಿ-ಹಳ್ಳಗಳಿದ್ದರೂ, ಕಾಲ ಕೆಳಗೆ ಎಷ್ಟೋ ಮುಳ್ಳ ಕೊಂಪೆಗಳಿದ್ದರೂ ಅವನ್ನು ನೋಡಿ ಮುಂದೇನು ಮಾಡಬೇಕೆಂಬ ಬಗ್ಗೆ ಮನದಲ್ಲಿ ವಿಚಾರ ಮಾಡಲು ಕೂಡ ಅವಕಾಶವಿರುವದಿಲ್ಲ. ಸತ್ತುಕೆಟ್ಟಾದರೂ ದಂಡಿನ ಮುಖ್ಯಸ್ಥನ ಆಜ್ಞೆ ಪಾಲಿಸಲೇ ಬೇಕಾಗುತ್ತದೆ. ಆದ್ದರಿಂದ ಈಗೊಂದು ಗಳಿಗೆ ನಿಂತಮಾತ್ರಕ್ಕೆ ನನಗೆ ಕೊಂಚವೂ ಶ್ರಮವಾಗಲಾರದು. ಶಿವದಾಸರೆ, ನಿಮ್ಮ ಗ್ರಂಥಪಠಣ ಇನ್ನೂ ಪೂರೈಸದಿದ್ದರೆ, ಸಾಗಲಿ; ನೀವು ನನ್ನತ್ತ ಲಕ್ಷ್ಯಕೊಡಬೇಡಿರಿ'

ಇಷ್ಟರಲ್ಲಿ ನಾರ್ಯಾನಿಂದ ಬೇರೊಂದು ಆಸನ ಸಿದ್ಧವಾಯ್ತು. ಗುಲಾಂ ಅಲಿ ದೇವರಿಗೆ ನಮಸ್ಕರಿಸಿ ತನ್ನ ಆಸನದಲ್ಲಿ ವಿಶ್ರಮಿಸಿದ. ಶಿವದಾಸನು ತನ್ನ ಪಠಣಕಾರ್ಯವನ್ನುಅಲ್ಲಿಗೇ ನಿಲ್ಲಿಸಿ, 'ಶಿಷ್ಟಾಗಮನೇ ಅನಧ್ಯಾಯಃ' ಎಂದಂದು, ಅಂದಿನ ಪಠಣವನ್ನು ಮುಗಿಸಿಬಿಟ್ಟನು.

ಬಳಿಕ ತುಸ ಹೊತ್ತು ಅವರು ಸುಮ್ಮನೆ ಕುಳಿತುಕೊಂಡರು. ನಂತರ ಆ ಯವನನು ಶಿವದಾಸನನ್ನು ಕುರಿತು:—ಶಿವದಾಸರೇ, ನಮ್ಮ ಮಾಯೆಯೆಲ್ಲಿ?-ಕಾಣಲೊಲ್ಲಳಲ್ಲ! ಇಲ್ಲಿಗೆ ಬಂದು ಅವಳ ಸ್ಮಿತ ವದನ ನೋಡದೆ ಹೋದರೆ, ಮನಸ್ಸಿಗೆ ಹಿಡಿದುಬಿಟ್ಟಂತಾಗುತ್ತದೆ. ನಾವೀರ್ವರೂ ಸದ್ಯಕ್ಕೆ ದೇವಾಲಯದಲ್ಲಿ ಕುಳಿತಿದ್ದರೂ, ಈ ದೇಗುಲದ ಅಧಿದೇವತೆಯಾದ ಮಾಯೆಯನ್ನೇ ಇಲ್ಲಿ ಕಾಣದ ಬಳಿಕ, ಇದಕ್ಕೆ ಹಾಳು ಗುಡಿಯೆಂದು ಬೇರೆ ಹೇಳಬೇಕೇ?

'ಎಲೊ ನಾರ್ಯಾ, ಮಾಯೆಯನ್ನು ಕರೆದುಕೊಂಡು ಬಾ ನೋಡುವ', ಎಂದು ಶಿವದಾಸನು ನಾರಾಯಣದೀಕ್ಷಿತನಿಗೆ ಹೇಳಿಕಳಿಸಿದ. ಬಳಿಕ ಸ್ಮಿತ ವದನದಿಂದ:—ಜಹಗೀರದಾರರೇ, ತಾವು ಮುಸಲ್ಮಾನ ಜಾತಿಯವರಾಗಿ ದ್ದರೂ ಹಿಂದೂ ಜನರ ದೇವತೆಗಳಿಗೆ ನಮಸ್ಕಾರ ಮಾಡುವದು, ಹಿಂದುಗಳ ದೇವಾಲಯಗಳನ್ನು ಮನ್ನಿಸುವದೇ ಮುಂತಾದ ನಿಮ್ಮ ಕೃತಿಗಳು ನಮ್ಮ ಹಿಂದೂಮತದವರಿಗೆ ಶ್ಲಾಘನೀಯಗಳಾಗಿ ತೋರಿದರೂ, ಇವೇ ಕೃತಿಗಳಿಗೆ ನಿಮ್ಮ ಯಾವನೀ ಧರ್ಮದ ಪ್ರಕಾರ ನೀವು ನರಕಕ್ಕೆ ಹೋಗಬೇಕಾಗುವ ದಲ್ಲವೇ?

ಭಾವನಾಪೂರ್ವಕವಾಗಿ ಯಾವ ದೇವರಿಗೆ ನಮಸ್ಕಾರ ಮಾಡಿದರೂ ತಪ್ಪಲ್ಲ; ಹಾಗೆ ಮಾಡುವದರಿಂದ ನಮ್ಮ ಧರ್ಮದ ಪ್ರಕಾರ ನರಕಕ್ಕೆ ಗುರಿಯಾಬೇಕಾಗುತ್ತದೆಂಬದು ಶುದ್ಧ ತಪ್ಪು ತಿಳುವಳಿಕೆ.

ಜಹಗೀರದಾರರೆ, ಎಲ್ಲರೂ ನಿಮ್ಮಂತೆ ತಿಳುವಳಿಕೆಯವರಿರುವದಿಲ್ಲ. ನಿಮ್ಮ ಮತದವರೂ ನಮ್ಮ ಮತದವರೂ ಎಲ್ಲರೂ ನಿಮ್ಮಂತೆ ಉಚ್ಚ ಭಾವ ನೆಯಿಂದ ನಡೆದರೆ, ಹಿಂದೂ ಮುಸಲ್ಮಾನರಲ್ಲಿ ಇಷ್ಟು ವೈಷಮ್ಯವುಂಟಾಗ ಲಿಕ್ಕೆಕಾರಣವೇ ಇರಲಿಲ್ಲ. ಎಲ್ಲರೂ ತಮ್ಮ ತಮ್ಮ ಮತಗಳ ಪ್ರಕಾರ ನಡೆ ದರೆ, ತತ್ವತಃ ಎಲ್ಲರೂ ಸಮಾನರೆಂದು ಭಾವಿಸಿದರೆ, ಈ ನಮ್ಮ ಹಿಂದು ಸ್ಥಾನದಲ್ಲಿ ಇಷ್ಟು ಅನರ್ಥಗಳೆಲ್ಲುಂಟಾಗುತ್ತಿದ್ದವು? ಎಲ್ಲವೂ ಸರಾಗವಾಗಿ ಸಾಗಿ, ಪ್ರತಿಯೊಬ್ಬರ ಆತ್ಮೋನ್ನತಿಗೆ ಸೌಲಭ್ಯವಾಗುತ್ತಿತ್ತು.

ಬ್ರಾಹ್ಮಣೋತ್ತಮಾ, ಈ ಜಗತ್ತಿನಲ್ಲಿ ದೇವರು ಒಬ್ಬನೇ ಇದ್ದು, ಅವ ನನ್ನು ಕಂಡುಕೊಳ್ಳುವದಕ್ಕಾಗಿಯೇ ಅನೇಕ ಧರ್ಮಗಳೂ, ಅನೇಕ ಮತ ಗಳೂ, ನಾನಾ ಪಂಥಗಳೂ ಉಂಟಾಗಿರುತ್ತವೆ. ಆಯಾ ಧರ್ಮಗಳಂತೆ ಅದರ ಅನುಯಾಯಿಗಳು ನಡೆದು, ತಮ್ಮ ಉನ್ನತಿ ಮಾಡಿಕೊಳ್ಳುವದು ವಿಹಿತವೇ ಆಗಿರುತ್ತದೆ; ಆದರೆ ಒಂದು ಧರ್ಮದವರು ಮತ್ತೊಂದು ಧರ್ಮ ವನ್ನು ತಿರಸ್ಕರಿಸಬೇಕೆಂಬದೂ, ತಾವು ಬಲಿಷ್ಠರಾದ ಮಾತ್ರಕ್ಕೆ ಉಳಿದವ ರಿಗೆ ತೊಂದರೆಯಿತ್ತು, ಅವರನ್ನು ಅವರ ಧರ್ಮದಿಂದ ಪರಾಙ್ಮುಖಪಡಿಸ ಲೆತ್ನಿಸಬೇಕೆಂಬದೂ ಎಲ್ಲಿಯ ನ್ಯಾಯ? ಈ ಪ್ರಕಾರದ ಬಲುಮೆಯಿಂದ ಸ್ವಧರ್ಮವನ್ನು ಬಲಿಸಲೆತ್ನಿಸುವದು ತೀರ ಮೂರ್ಖತನವಾಗಿರುತ್ತದೆ. ಯಾಕಂದರೆ, ಹಾಗೆ ಜುಲುಮೆಯಿಂದ ಹಿಡಿದುತಂದ ಜನರು ಮೂಲ ಧರ್ಮ

ಕರ್ತನ ನಿಜವಾದ ಅನುಯಾಯಿಗಳು ಎಂದಾದರೂ ಆಗಬಲ್ಲರೆ? ಪ್ರಸ್ತುತ ನಮ್ಮ ಮುಸಲ್ಮಾನ ಜನರು ಪರಧರ್ಮಿಗಳ ಮೇಲೆ ಈ ವಿಷಯವಾಗಿ ಒತ್ತಾಯ ಮಾಡುವದು ನನಗೆ ಕೊಂಚವೂ ಸಮ್ಮತವಾಗಿರುವದಿಲ್ಲ. ಯಾವದೊಂದು ಊರಿಗೆ ಹೋಗಲಿಕ್ಕೆ ಅನೇಕ ದಾರಿಗಳಿರುವಂತೆ, ಜಗದೀಶನನ್ನು ಕಾಣಲಿಕ್ಕಾದರೂ ಅನೇಕ ಧರ್ಮ ಮಾರ್ಗಗಳಿರುತ್ತವೆ. ಒಬ್ಬನು ಒಂದು ಮಾರ್ಗವ ಹಿಡಿದು ತನ್ನ ಇಷ್ಟಪೂರ್ತಿಮಾಡಿಕೊಂಡರೆ, ಮತ್ತೊಬ್ಬನು ಮತ್ತೊಂದು ಮಾರ್ಗದಿಂದ ಅದೇ ಕಾರ್ಯಕ್ಕೆ ತೊಡಗಿರುವನು. ಅವನನ್ನು ಆ ಮಾರ್ಗದಿಂದ ಹಿಡಿದೆಳೆದು, ಚ್ಯುತಿಗೊಳಿಸುವದು ಎಂದಿಗೂ ಯಾರಿಗೂ ಶ್ರೇಯಸ್ಕರವಾಗಿರುವದಿಲ್ಲ. ಧರ್ಮಾಧರ್ಮಗಳಲ್ಲಿಯ ಈ ಬಡಿದಾಟವು ನಿರಂತರವಾಗಿ ತಪ್ಪಬೇಕಾದರೆ, ಒಬ್ಬನು ಒಂದು ಮಾರ್ಗ ಹಿಡಿದು ದೇವರ ದರ್ಶನಹೊಂದಿದ್ದರೂ, ಅವನೇ ಬೇರೆ ಹಲಕೆಲವು ಮಾರ್ಗಗಳಿಂದ ಹೋಗಿ ಅದೇ ದೇವರನ್ನು ಕಂಡು ಬರುವ ಯತ್ನ ಮಾಡಬೇಕು; ಅಂದರೆ ಅವನಿಗೆ ಆ ಎಲ್ಲ ಮಾರ್ಗಗಳ ರಹಸ್ಯವು ತಿಳಿದುಬರುವದಲ್ಲದೆ ಎಲ್ಲರ ಇಷ್ಟ ಸಾಧನೆಯೂಒಂದೇ ಎಂಬದು ಮನಗಾಣುವದರಿಂದ ಅವನು ಯಾವ ಧರ್ಮವನ್ನೂ ಜರೆಯಲಿಕ್ಕೆ ಮನಸ್ಸು ಮಾಡುವದಿಲ್ಲ. ನನ್ನ ಸ್ಥಿತಿಯಾದರೂ ಇದರಂತೆಯೇ ಆಗಿರುತ್ತದೆ"

"ಜಗತ್ತಿನೊಳಗಿನ ಈ ಬಡಿದಾಟಕ್ಕೆ ಜಗತ್ಕರ್ತೃವಿನ ಅಂಗಸಂಭೂತಳಾದ ಮಹಾ ಮಾಯೆಯೇ ಕಾರಣಳಾಗಿರುವದರಿಂದ, ಆ ದೋಷ ಬೇರೆ ಯಾರನ್ನೂ ತಟ್ಟಿಕೊಳ್ಳುವದಿಲ್ಲ. ಆಕೆಯ ಪ್ರೇರಣೆಯಿಂದಲೇ ಜಗತ್ತು ಇಷ್ಟು ಅನರ್ಥಕ್ಕೆ ಗುರಿಯಾಗಿರುತ್ತದೆ. ಈ ಬಗ್ಗೆ ಜಗದೀಶನಿಗೇ ದಯೆಯುಂಟಾಗಬೇಕು. ಅವನು ತನ್ನ ಮಾಯೆಯನ್ನು ತಾನೇ ಆವರಿಸಿ ಜಗ್ಗಿಕೊಂಡರೆ, ಎಲ್ಲ ಧರ್ಮಿಗಳೂ ಅವನನ್ನು ಏಕಸಮಯಾವಚ್ಛೇದದಿಂದ ಕಾಣುವರು. ಎಲ್ಲಿಯ ವರೆಗೆ ಜನರ ಕಣ್ಣಿಗೆ ಜಗದೀಶನ ಬದಲು ಮಾಯೆಯೇ ಕಾಣಿಸಿಕೊಳ್ಳುವಳೋ, ಅಲ್ಲಿಯ ವರೆಗೆ ಎಂಥ ಸದುಪದೇಶದಿಂದಲೂ ಈ ಜಗದ್ವಾಸಿಗಳೆಲ್ಲರ ಕಲ್ಯಾಣವು ಒಮ್ಮೆಲೆ ಆಗಲಾರದು.

ಅವರಿಬ್ಬರೂ ಈ ಪ್ರಕಾರ ಪಾರಮಾರ್ಥಿಕ ವಿಚಾರದಲ್ಲಿ ತೊಡಗಿರಲು, ಮಾಯೆಯು ಸಮ್ಮುಖಸ್ಥಳಾಗಿ ಬಂದು ನಿಂತಳು. ಆಗ ಗುಲಾಮ ಅಲಿಯು: " ಈ ನಮ್ಮ ಮಾಯೆಯನ್ನು ಕಂಡ ಕೂಡಲೆ ಆ ಜಗನ್ಮಾಯೆಯ ವಿಸ್ಮರಣವೇ ಆಗಿ ಬಿಡುವದು " ಎಂದಂದನು.

# [೨]

ಒಬ್ಬ ಹುಡುಗಿ ಒಂದು ತಾಂಬೂಲ ಕರಂಡಕದಲ್ಲಿ ಕೆಲವು ವೀಳ್ಯಗಳನ್ನಿಟ್ಟುಕೊಂಡು ಶಿವದಾಸ-ಗುಲಾಮ ಅಲಿಯಾವರು ಕುಳಿತಲ್ಲಿಗೆ ಬಂದಳು. ಆ ಬಾಲಿಕೆ ಹನ್ನೊಂದು-ಹನ್ನೆರಡು ವರ್ಷದವಳಾಗಬಹುದು. ಅಪ್ಸರ ಕನ್ಯೆಯಂತೆ ಅವಳು ಅನುಪಮೇಯ ಸುಂದರಿಯಾಗಿದ್ದಳು. ಆ ಹುಡುಗಿ ಶಿವದಾಸನ ಮೊಮ್ಮಗಳು. ಅವಳ ಹೆಸರು 'ಮಾಯಾ' ಎಂದಿತ್ತು. ಅವಳ ಪಿತಾಮಹನ ಸೋದರತುಲ್ಯನಾದ ಗುಲಾಮ ಅಲಿಯು ಅವಳನ್ನು ಹೊಟ್ಟೆಯ ಮಗಳಂತೆ ಪ್ರೀತಿಸುತ್ತಿದ್ದನು. ಅವನು ಅವಳಿಗೆ ತಂಗಿಯೆಂದು ಕರೆಯುತ್ತಿದ್ದನು.

ಅಲ್ಲಿಗೆ ಬಂದ ಕೂಡಲೆ ಬಾಲಿಕೆ :—"ಓಹೋ! ಜಹಗೀರದಾರರು ಬಂದಿರುವರಲ್ಲ!! ಈಗೆಷ್ಟೋ ದಿನಗಳಿಂದ ತಮ್ಮ ದರ್ಶನವಾಗಿರಲಿಲ್ಲ. ಇದೆಯೋ ತಾವು ನನ್ನನ್ನು ಪ್ರೀತಿಸುತ್ತಿರುವ ಲಕ್ಷಣ? ಹೀಗೆ ಮಾಡದೆ ಆಗಾಗ್ಗೆ ಬಂದು ಭೆಟ್ಟಿ ಕೊಡುವದಕ್ಕಾಗಿಯೇ ನಾನು ನಿಮಗೆ ಈ ವಿಳ್ಯವನ್ನು ಕೊಡುತ್ತೇನೆ"ಂದು ನುಡಿದು, ಮಾಯೆಯು ಕರಂಡಕದೊಳಗಿನ ಒಂದೆರಡು ವಿಳ್ಯಗಳನ್ನು ತೆಗೆದು ಗುಲಾಮ ಅಲಿಯ ಕೈಗಿತ್ತಳು

"ತಂಗೀ, ಈ ಸಾರೆ ನಿನಗೆ ಭೇಟಿಯಾಗಲಿಕ್ಕೆ ತುಸ ವಿಲಂಬವಾದದ್ದೇನೊ ನಿಜ; ಆದರೆ ಮಹತ್ವದ ರಾಜಕಾರಣದ ಮೂಲಕ ಇಷ್ಟು ದಿನಗಳವರೆಗೆ ಬರಲಿಕ್ಕಾಗಿರಲಿಲ್ಲ. ಸಮಯ ದೊರೆತಾಗೆಲ್ಲ ಸಾವಿರ ಕೆಲಸ ಬಿಟ್ಟು ಬಂದು ನಿನಗೆ ಭೆಟ್ಟಿಯಾಗುತ್ತಿರುವದಿಲ್ಲವೆ?" ಎಂದು ಮುಗುಳು ನಗೆಯುಕ್ತವಾಗಿ ನುಡಿದು, ಗುಲಾಮ ಅಲಿಯು ತಾಂಬೂಲ ಭಕ್ಷಿಸಲುದ್ಯುಕ್ತನಾದನು.

" ಇಲ್ಲಿಗೆ ಬರದಿರಲಿಕ್ಕೆ ರಾಜಕಾರಣದ್ದೊಂದೇ ನೆವವೋ, ಗೃಹಕಾರಣದ ಬೇರೆ ನೆವವುಂಟಾಗಿತ್ತೋ ಯಾರು ಬಲ್ಲರು? ಬೀಬೀಸಾಹೇಬರ ಅಪ್ಪಣೆ ದೊರೆತಿರಕ್ಕಿಲ್ಲೆಂದು ತೋರುತ್ತದೆ. ಜಹಗಿರದಾರರೇ, ನನ್ನ ಅನುಮಾನ ಸತ್ಯವಷ್ಟೇ ?"

"ನಾನು ಬೀಬೀಸಾಹೇಬರ ಅಂಥ ಹೊಲ್ಲದ ವಿಚಾರಗಳಿಗೆ ತಲೆಹಾಕುವವನೇ? ತಂಗೀ, ಮಿಥ್ಯಾರೋಪಮಾಡಿ ನನಗೇಕೆ ದೋಷ ಕೊಡುತ್ತೀ ?"

"ಜಹಗೀರದಾರರೇ, ಬೀಬೀಸಾಹೇಬರು ಸೌಖ್ಯವಾಗಿರುವರೇ? ಎಷ್ಟೋ

ದಿನಗಳಿಂದ ನಾನವರಿಗೆ ಭೇಟಿಯಾಗಿರುವದಿಲ್ಲ. ”

“ಕ್ಷೇಮವಾಗಿರುತ್ತಾರೆ; ನಾಳೆ ಬೆಳಗ್ಗೆ ಮೇಣೆಯನ್ನು ಕಳಿಸಿ ಕೊಡುವೆನು. ಶಿವದಾಸರೇ, ಈ ನಮ್ಮ ತಂಗಿಯನ್ನು ಕಳಿಸಿ ಕೊಡಲಿಕ್ಕೆ ಅನುಕೂಲವಾಗಬಹುದೊ ?”

“ಇದೆಂಥ ವಿಲಕ್ಷಣ ಪ್ರಶ್ನೆ ಮಾಡುತ್ತೀರಿ ಜಹಗೀರದಾರರೇ? ಇವಳನ್ನು ನಿಮ್ಮಲ್ಲಿಗೆ ಕರೆದೊಯ್ಯುವದಕ್ಕಾಗಿ ನನ್ನ ಅನುಮತಿಯೇತಕ್ಕೆ? ಕರೆದೊಯ್ಯಬೇಕೆಂದು ಅನಿಸಿದಾಗೆಲ್ಲ ತಾವು ಇವಳನ್ನು ಕರೆದೊಯ್ಯಬಹುದು. ನನಗೆ ಹೇಗೆ ಇವಳು ಮೊಮ್ಮಗಳೋ, ಹಾಗೆಯೇ ನಿಮಗೂ ಇವಳು ಮೊಮ್ಮಗಳಲ್ಲವೆ? ಯಾಕಂದರೆ ನೀವು ನನ್ನ ಬೆನ್ನಿಲೆ ಬಿದ್ದ ಬಂಧುಗಳಂತಿರುವಿರೆಂಬದನ್ನು ಬೇರೆ ಹೇಳಬೇಕೆ?”

“ತಾವು ಅನುಗ್ರಹಪೂರ್ವಕವಾಗಿ ನನ್ನನ್ನು ತಮ್ಮ ಬಂಧುಗಳೆಂದು ತಿಳಿಯುತ್ತಿರುವದು ತಮ್ಮಂಥ ವಿದ್ವಾನ್ ಬ್ರಾಹ್ಮಣರಿಗೆ ಯೋಗ್ಯವೇ ಸರಿ.”

“ಇದರಲ್ಲಿ ನನ್ನ ಅನುಗ್ರಹವೇತರದು? ಅನುಗ್ರಹಕರ್ತರು ತಾವೇ ಆಗಿರುತ್ತೀರಿ. ಆಗುತ್ತಿದ್ದರೆ, ನನ್ನ ನಿಗ್ರಹವು ಮಾತ್ರ ನಿಮಗಾಗುತ್ತಿರಬಹುದಾಗಿದೆ. ”

“ ಬ್ರಾಹ್ಮಣೋತ್ತಮಾ, ಬ್ರಾಹ್ಮಣರ ವಾಕ್‌ಪಾಂಡಿತ್ಯದ ಹುಟ್ಟುಗುಣವು ನಿನ್ನಿಂದ ಹೇಗೆ ತೊಲಗಬೇಕು? ಹುಟ್ಟುಗುಣ ಹುಗಿದರೂ ಹೋಗಬಲ್ಲದೆ? ತಂಗೀ, ನಮ್ಮ ಬೀಬೀಸಾಹೇಬರ ಭೇಟಿಗೆ ಬರುವಾಗ ನೀನೇನು ನಜರಾಣೆ ತರುವೆ, ಹೇಳು ನೋಡುವಾ?”

“ದಿನಾಲು ನಜರಾಣೆ ತರಲಿಕ್ಕೆ ನಾವೇನು ಜಹಗೀರದಾರರೇ?” ಎಂದು ಮಾಯೆಯು ಸ್ಮಿತವದನದಿಂದ ನುಡಿಯಲು,

“ನಜರಾಣೆ ತರದಿದ್ದರೆ ನಿನಗೆ ಬೀಬೀಸಾಹೇಬರ ಭೇಟಿ ಹೇಗಾದೀತು?”

“ಮಾಯಾ, ಮೊನ್ನೆ ಹೊಸದಾಗಿ ಕಲಿತಿರುವ ಆ ಶಿವಸ್ತೋತ್ರವನ್ನು ನಮ್ಮ ಜಹಗೀರದಾರರಿಗೆ ಅಂದು ತೋರಿಸಬಾರದೆ? ಅದು ಇವರಿಗೆ ರುಚಿಸಿದರೆ, ಅದನ್ನೇ ನೀನು ನಾಳೆ ಇವರ ಬೀಬೀಸಾಹೇಬರೆದುರಿಗೆ ನಜರಾಣೆಯೆಂದು ಅಂದು ತೋರಿಸಿದರಾಯಿತು ಈ ಸ್ತೋತ್ರ-ಪದ್ಯಗಳೇ ನಮ್ಮ ಭಟ-ಭಿಕ್ಷುಕ ಬ್ರಾಹ್ಮಣರಿಂದ ಮಾನ್ಯರಿಗೆ ಕೈಸಡಿಲುಬಿಟ್ಟು ಅರ್ಪಿಸುವ ನಜರಾಣೆಗಳಾಗಿರುತ್ತವೆ.”

ಮಾಯೆಯು ತಾಂಬೂಲ ಕರಂಡಕವನ್ನು ಕೆಳಗಿಟ್ಟು, ದೇವಿಯ ಕಡೆಗೆ ಮೋರೆಮಾಡಿ ಕೈಜೋಡಿಸಿ, ಕಣ್ಣುಮುಚ್ಚಿ, ಸುಂದರ ಸುಲಲಿತ ಸ್ವರದಿಂದ ಆ ಶಿವಸ್ತೋತ್ರವನ್ನು ಅನ್ನಲಾರಂಭಿಸಿದಳು

ಆ ಸ್ತೋತ್ರವನ್ನು ಕೇಳಿ ಗುಲಾಮ ಅಲೀಸಾಹೇಬನ ಅಂತಃಕರಣವು ಪ್ರೇಮಭರಿತವಾಯಿತು. ಆಗ ಅವನ ಕಣ್ಣೊಳಗಿಂದ ಪ್ರೇಮಾಶ್ರುಗಳು ಒಂದೇಸವನೆ ಸುರಿಯಹತ್ತಿದವು ನಂತರ ಗದ್ಗದವಾಣಿಯಿಂದ ಅವನು:— "ಅಹಹಾ! ಎಂಥ ಸುಲಲಿತ ಸ್ತೋತ್ರವಿದು!! ಈ ದೇಶದ ಕವಿಗಳು ದೇವರ ಸ್ತೋತ್ರಗಳನ್ನು ಎಷ್ಟು ಮಾರ್ಮಿಕವಾಗಿ ರಚಿಸುತ್ತಿರುವರಲ್ಲ! ಇಂಥ ಈ ಸುಂದರ ಸ್ತೋತ್ರಗಳು ಈ ಸುಕುಮಾರ ಬಾಲಿಕೆಯ ಬಾಯಿಂದ ಕೇಳಿದಡಂತೂ ಕೇಳುವವನು ಒಮ್ಮೆಲೆ ತಲ್ಲೀನತೆಯನ್ನೇ ಹೊಂದಿಬಿಡುವನು!"

ಜಹಗೀರದಾರರೇ, ನೀವೀ ಸ್ತೋತ್ರವನ್ನು ಕೇಳಿ ಕೇವಲ ಹಿಂದುಗಳೇ ಆಗಿಹೋದಿರಲ್ಲ?" ಎಂಬ ಮಾಯೆಯ ಪ್ರಶ್ನೆಗೆ,

"ಯಾವನು ದೇವರಲ್ಲಿ ನಿಜವಾದ ಭಕ್ತಿಯುಳ್ಳವನಿರುವನೋ ಅವನು ಹಿಂದೂ-ಮುಸಲ್ಮಾನಗಳೆಂಬ ದ್ವಂದ್ವಗಳಲ್ಲಿ ಎಂದೂ ಸಿಕ್ಕಲಾರನು. ಅವನು ಎಲ್ಲ ಧರ್ಮಗಳಿಗೂ ಸಮಾನನೇ ಆಗಿರುತ್ತಾನೆ."

"ಒಬ್ಬನೇ ಎಲ್ಲ ಧರ್ಮಗಳಿಗೂ ಸಮಾನನಾಗುವದು ಶಕ್ಯವಾದರೂ ಉಂಟೆ?"

"ತಂಗೀ, ಹಾಗೆ ತಿಳಿಯಬೇಡ. ಅಂತರಿಕ ಸಮಾನತ್ವವು-ಶ್ರೇಷ್ಠತ್ವವು ಬಹಿರಂಗದಲ್ಲಿ ಹೇಗೆ ತಿಳಿದು ಬಂದೀತು? ಬಹಿರಂಗ ವ್ಯಾಪಾರದಲ್ಲಿ ಅಡಿಗಡಿಗೆ ಭೇದಭಾವಗಳಿರುತ್ತವೆ; ಆದರೆ ಅಂತರಂಗದ ಶುದ್ಧ ವ್ಯಾಪಾರಕ್ಕೆ ಯಾವ ಭೇದ-ಭಾವಗಳೂ ಸೋಂಕಲಾರವು."

ಈ ಪ್ರಕಾರ ಅವರ ಸಂಭಾಷಣವು ನಡೆದಿರಲು, ಒಬ್ಬ ದೂತನು ಬಂದು ಜಹಗೀರದಾರನಿಗೆನವಾಬಸಾಹೇಬನ ಮಹತ್ವದ ಆದೇಶವನ್ನು ತಿಳಿಸಿದನು. ಕೂಡಲೆ ಗುಲಾಮ ಅಲಿಯು ಎದ್ದು ನಿಂತು :— "ತಂಗೀ, ಮಾಯಾ ನಾನೀಗ ಹೊರಡುವೆನು. ಬಹಳ ದಿವಸಗಳಿಂದ ನಿನ್ನ ಭೇಟಿಗೆ ಯಾಕೆ ಬಂದಿರಲಿಲ್ಲೆಂದು ನೀನು ಆಗಲೆ ಸಿಟ್ಟಾಗಿವೆಯಲ್ಲವೆ? ಇಗೋ, ನೋಡು, ನನಗೆ ಷ್ಟು ಅವಸರದ ಕೆಲಸಗಳಿರುತ್ತವೆಂಬುದನ್ನು? ಶಿವದಾಸರೇ, ಬಳಲಿಯಾ ಇನ್ನು?" ಎಂದಂದು ಚಾರರನನ್ನನುಸರಿಸಿ ನಡೆದನು.

ಆಗ ಮಜೀದ ಖಾ ಎಂಬವನು ಬಂಗಾಲದ ನವಾಬನಾಗಿದ್ದನು. ಅಕಬರನು ದಿಲ್ಲಿಯ ಬಾದಶಹ. ಆಗಿನ ಆ ಬಾದಶಾಹೀ ಅಮಲಿನಲ್ಲಿ ನಮ್ಮ ಗುಲಾಮ ಆಲಿ ಅಲೀಬಾಗ ಸಂಸ್ಥಾನದ ಜಹಗೀರದಾರನಾಗಿದ್ದ.

ಅಕಬರನು ಹಿಂದೂ-ಮುಸಲ್ಮಾನರನ್ನು ಸಮಾನವಾಗಿ ನಡೆಸಿಕೊಳ್ಳುತ್ತಿದ್ದನೆಂದು ಖ್ಯಾತಿಯಿದೆ; ಆದರೆ ಅಕಬರ ಬಾದಶಹನಿಗಿಂತ ಪೂರ್ವದಿಂದಲೇ ಬಾದಶಾಹೀ ರಾಜಧಾನಿಯಿಂದ ಬಹು ದೂರದಲ್ಲಿ ಸ್ಥಿರವಾಗಿ ವಾಸಿಸುತ್ತಿದ್ದ ಮುಸಲ್ಮಾನ ಅಮಲದಾರರೂ ಜಹಗೀರದಾರರೂ ಅಲ್ಲಿಯ ಹಿಂದೂ ಪ್ರಜೆಗಳೊಡನೆ ಉದಾರತನದಿಂದ ನಡೆಕೊಳ್ಳುತ್ತಿದ್ದರು; ಮತ್ತು ಹಿಂದು ಜನರಾದರೂ ಮುಸಲ್ಮಾನರ ಆ ಸೌಜನ್ಯಕ್ಕೆ ಸರಿಯಾಗಿಯೇ ನಡೆಯುತ್ತಿದ್ದರು. ಆಗಿನ ಸಮಾಜದಲ್ಲಿ ಜಾತಿಭೇದಗಳಿಂದ ವೈಷಮ್ಯಕ್ಕೆ ವಿಶೇಷ ಆಸ್ಪದವಿರಲಿಲ್ಲ. ಧರ್ಮದಿಂದ ಎಂಥ ನಿಷ್ಠುರರಾಗಿದ್ದರೂ ದೂರ ದೂರ ಪ್ರದೇಶಗಳಲ್ಲಿ ಮುಸಲ್ಮಾನರ ಪ್ರಸಾರವು ವಿಶೇಷವಾಗಿದ್ದರಿಂದ, ಅವರ ಆ ನಿಷ್ಠುರತೆಯು ತಾನಾಗಿಯೇ ಕುಗ್ಗುತ್ತಿತ್ತು. ಅನುಯಾಯಿಗಳ ಬೆಂಬಲವಿರದ್ದರಿಂದ, ಆಗಿನ ಮುಸಲ್ಮಾನ ಜನರು ತಮ್ಮ ಸುತ್ತಮುತ್ತಲಿನ ಹಿಂದುಗಳೊಡನೆಯೇ ಸಹಕಾರತೆಯಿಂದ ನಡೆಯಬೇಕಾದುದು ಸ್ವಾಭಾವಿಕವಾಗಿತ್ತು. ಮುಸಲ್ಮಾನರು ಹಿಂದುಸ್ಥಾನದಲ್ಲಿ ಬಹಳ ದಿವಸಗಳವರೆಗೆ ಇರಹತ್ತಿದ್ದರಿಂದ, ಅವರಲ್ಲಿ ದೇಶಾಭಿಮಾನವು ಬೆಳೆಯಿತು. ಸಹವಾಸಯೋಗದಿಂದ ಪರಸ್ಪರರಿಗೆ ಪರಸ್ಪರರ ಧರ್ಮದ ಮರ್ಮಗಳೆಲ್ಲ ಚೆನ್ನಾಗಿ ತಿಳಿದು, ಎಲ್ಲರೂ ಸ್ವ-ಸ್ವಧರ್ಮದಿಂದ ನಡೆಯಲು ಅನುಕೂಲವಾಗಿತ್ತು. ಧಾರ್ಮಿಕ ಬಾಬಿನಲ್ಲಿ ಯಾರೂ ಪರರಿಗೆ ತೊಂದರೆ ಕೊಡದಂತಾದರು. ಪ್ರಜೆಗಳ ಈ ತರದ ಸ್ವಧರ್ಮಾನುರಾಗಕ್ಕೆ ಆಗಿನ ಉದಾರಮತವಾದಿಗಳಾದ ಮುಸಲ್ಮಾನ ಭೂಸ್ವಾಮಿಗಳೇ ಹೆಚ್ಚಾಗಿ ಕಾರಣರಾಗಿದ್ದರು. ಅವರಲ್ಲಿ ಅಲೀಬಾಗದ ಜಹಾಗಿರದಾರನಾದ ನಮ್ಮ ಗುಲಾಮ ಆಲಿ ಅಗ್ರಗಣ್ಯನಾಗಿದ್ದ.

ಸರಳ, ಸಹೃದಯ ಹಾಗು ಧರ್ಮಪ್ರಾಣನಾದ ಗುಲಾಮ ಆಲಿ ಈಶ್ವರೀ ನಿಷ್ಠೆಯಿಂದಲೂ, ಪ್ರಜಾ ವಾತ್ಸಲ್ಯದಿಂದಲೂ ಲೌಕಿಕ ವಿಚಾರದಿಂದ ಎಷ್ಟು ಮಾನಸೀಯನಾಗಿದ್ದನೋ, ಅದಕ್ಕಿಂತಲೂ ತನ್ನ ಅಂತರಂಗದಲ್ಲಿಯ ಹಿಂದು-ಮುಸಲ್ಮಾನರ ಐಕ್ಯದ ಲಾಲಸೆಯಿಂದ ಅವನು ಹೆಚ್ಚು ಲೋಕಮಾನ್ಯನಾಗಿದ್ದ.

ಪೂರ್ವವಯಸ್ಸಿನಿಂದಲೂ ಶಿವದಾಸನ ಕೂಡ ಗುಲಾಮ ಅಲಿಯ ಸಖ್ಯ ವಿಶೇಷವಾಗಿತ್ತು. ಶಿವದಾಸನಾದರೂ ಪಂಡಿತನೂ ಧಾರ್ಮಿಕನೂ ಇದ್ದಂತೆ ಪರಧರ್ಮ ಸಹಿಷ್ಣುತೆಯುಳ್ಳ ಉದಾರ ಸ್ವಭಾವದವನಿದ್ದ. ಮಹಾನುಭಾವದವನಾದ ಗುಲಾಮ ಅಲಿಯನ್ನು ಮ್ಲೇಂಛ ಜಾತಿಯವನೆಂದು ಅವನೊಡನೆ ಶಿವದಾಸನು ಕೊಂಚವೂ ತಿರಸ್ಕಾರದಿಂದ ನಡೆಯುತ್ತಿರಲಿಲ್ಲ. ಅವರೀರ್ವರಲ್ಲಿಯ ಬಾಲ್ಯ ಸಖ್ಯವು ಪರಿಣತ ವಯಸ್ಸಿನಲ್ಲೂ ಕ್ರಮವಾಗಿ ವೃದ್ಧಿಂಗತವಾಗುತಲಿತ್ತು. ಲೌಕಿಕಾಚಾರದ ಸಲುವಾಗಿ ಅವರು ತಮ್ಮ ತಮ್ಮ ಜಾತಿಯಂತೆ ಊಟ-ಉಡಿಗೆಗಳ ವ್ಯವಹಾರಗಳನ್ನಷ್ಟು ಬೇರೆ ಬೇರೆ ಮಾಡುತ್ತಿದ್ದರೇ ವಿನಃ, ಅವರೀರ್ವರಲ್ಲಿ ಮಿಕ್ಕ ಭೇದಭಾವವು ಸ್ವಲ್ಪವೂ ಇರಲಿಲ್ಲ. ಸಹೃದಯನಾದ ಗುಲಾಮ ಅಲಿಯು ಬರಿಯ ಶಿವದಾಸನ ಕೂಡವೇ ಹೀಗೆ ನಡೆಯುತ್ತಿದ್ದನೆಂತಲ್ಲ; ಹಿಂದೂ ಮುಸಲ್ಮಾನ ಜಾತಿಯ ತನ್ನ ಎಲ್ಲ ಪ್ರಜಾಗಣಗಳೊಡನೆಯೂ ತೀರ ಆತ್ಮೀಯ ಭಾವದಿಂದ ನಡೆಕೊಳ್ಳುತ್ತಿದ್ದನು. "ತಾನು ಶ್ರೀಮಂತನಾದ ಜಹಗೀರದಾರ; ಪ್ರಜೆಗಳೊಡನೆ ಕೂಡಿ ನಡೆಯುವದರಿಂದ ತನ್ನ ಮರ್ಯಾದೆ ಕಡಿಮೆಯಾಗುವದು" ಎಂಬ ದುರಹಂಕಾರ ಅವನನ್ನು ಕೊಂಚವೂ ಸೋಂಕಿದ್ದಿಲ್ಲ ಅದರಿಂದ ಆ ಪ್ರಜಾವತ್ಸಲನು ಪ್ರಜೆಗಳ ಮನೆಯ ಸರ್ವಸಾಧಾರಣ ಶುಭಕಾರ್ಯಗಳಲ್ಲಿಯೂ ಸಾವು-ಕೇಡುಗಳಂಥ ಕಠಿಣ ಪ್ರಸಂಗಗಳಲ್ಲಿಯೂ ಅವರ ಮನೆ ಮುಟ್ಟಿ ಹೋಗಿ, ಅವರನ್ನು ಸಮಾಧಾನಪಡಿಸುತ್ತಿದ್ದನು.

ಶಿವದಾಸನು ಹಿಂದೂ ಧರ್ಮಶಾಸ್ತ್ರಾದಿಗಳಲ್ಲಿ ಪಾರಂಗತನಾಗಿದ್ದಂತೆ, ಗುಲಾಮ ಅಲಿಸಾಹೇಬನು ಮುಸಲ್ಮಾನೀ ಧರ್ಮಶಾಸ್ತ್ರಗಳನ್ನು ಚೆನ್ನಾಗಿ ತಿಳಿದವನಾಗಿದ್ದ. ಈ ಉಭಯ ವಿದ್ವಾಂಸರು ಪರಸ್ಪರರ ನಿಕಟ ಸಹವಾಸದಿಂದ ಪರಸ್ಪರರ ಧರ್ಮಗಳ ಮರ್ಮವನ್ನು ಚನ್ನಾಗಿ ಅರಿತುಕೊಂಡಿದ್ದರು. ಉಭಯ ಧರ್ಮಗಳ ಇಂಗಿತವು ಮನದಟ್ಟಾದದ್ದರಿಂದ, ಅವರೀರ್ವರೂ ಉಭಯ ಧರ್ಮಗಳಲ್ಲಿ ಒಳ್ಳೇ ಶ್ರದ್ಧಾವಂತರಾಗಿದ್ದರು. ಅವರಲ್ಲಿಯ ಆ ಶ್ರದ್ಧೆ ಹಿಂದೂ ಮುಸಲ್ಮಾನರ ಐಕ್ಯಕ್ಕೆ ಕಾರಣವಾಗಿತ್ತೆಂದು ಬೇರೆ ಹೇಳಬೇಕಾಗಿರುವದಿಲ್ಲ.

# [೩]

ಮಾಯಿ ಶಿವದಾಸನ ಒಬ್ಬೊಂಟಿಗಳಾದ ಮೊಮ್ಮಗಳು. ಬಾಲ್ಯದಲ್ಲಿಯೇ ಅವಳಿಗೆ ಮಾತಾ-ಪಿತೃಗಳ ವಿಯೋಗವಾಗಿತ್ತು. ಶಿವದಾಸನಿಗೆ ಮತ್ತೆ ಇಬ್ಬರು ಮಕ್ಕಳಿದ್ದರು. ಅವರ ಮಕ್ಕಳು-ಮರಿಗಳಿಂದ ಅವನ ಮನೆ ಸುಶೋಭಿತವಾಗಿತ್ತು; ಆದರೆ ಶಿವದಾಸ ಆ ಎಲ್ಲ ಹುಡುಗರಿಗಿಂತ ತಂದೆ-ತಾಯಿಗಳಿಲ್ಲದ ಈ ಮಾಯೆಯನ್ನೇ ಹೆಚ್ಚಾಗಿ ಪ್ರೀತಿಸುತ್ತಿದ್ದ. ಮಾಯೆಯು ಅಜ್ಜನ ಸಹವಾಸದಲ್ಲಿಯೇ ವಿಶೇಷವಾಗಿರುತ್ತಿದ್ದದರಿಂದ, ಅವನು ಅವಳಿಗೆ ಓದು-ಬರೆಹ-ಸ್ತೋತ್ರ ಪಾಠಗಳನ್ನು ಕಲಿಸಿದ್ದ ಶಿವದಾಸನ ಬಳಿಗೆ ಗುಲಾಮಅಲಿಯ ಬರ-ಹೋಗೋಣ ಹೆಚ್ಚು. ಅದರಿಂದ ಅವನಾದರೂ ಶಿವದಾಸನ ಇತರ ಮೊಮ್ಮಕ್ಕಳಿಗಿಂತ ಮಾಯೆಯನ್ನೇ ಬಹಳವಾಗಿ ಪ್ರೀತಿಸುತ್ತಿದ್ದ. ಮಾಯೆಯ ಮನೋಹರ ರೂಪ, ಮಾಧುರ್ಯಯುಕ್ತ ಕಂಠಸ್ವರ, ನಗೆಮೊಗ ಇವೆಲ್ಲವುಗಳು ಅವಳನ್ನು ನೋಡಿದ ಪ್ರತಿಯೊಬ್ಬರಲ್ಲಿಯೂ ಅವಳ ವಿಷಯದ ಆದರವನ್ನು ವೃದ್ಧಿಗೊಳಿಸುತ್ತಿದ್ದವು. ಪದ್ಧತಿಯಂತೆ ಬಾಲ್ಯದಲ್ಲಿಯೇ ಮಾಯೆಯ ವಿವಾಹವಾಗಿತ್ತು; ಆದರೆ ಲಗ್ನವಾದ ತುಸ ದಿವಸಗಳಲ್ಲಿಯೇ ವಿಧಿವಶಾತ್ ಆಕೆಗೆ ವೈಧವ್ಯ ಪ್ರಾಪ್ತವಾಯಿತು! ಸಂಸಾರಧರ್ಮಕ್ಕಾಗಿ ಮಾಯೆಯನ್ನು ದೇವರು ಸೃಷ್ಟಿಸಿರಲಿಲ್ಲ; ತನ್ನ ಸೇವೆಗಾಗಿಯೇ ಅವಳಿಗೆ ಸ್ತ್ರೀ ಜನ್ಮವನ್ನು ಕೊಟ್ಟು ಮರ್ತ್ಯಲೋಕಕ್ಕೆ ಕಳಿಸಿದ್ದನು !

ಗುಲಾಮಅಲಿಯು ಚಂಡೀಮಂಟಪದಲ್ಲಿ ಕುಳಿತಾಗ ಸಾಶ್ರುನಯನಗಳಿಂದ ಶಿವದಾಸನನ್ನು ಕುರಿತು:—“ಬ್ರಾಹ್ಮಣೋತ್ತಮನೇ, ನಮ್ಮ ಈ ತಂಗಿ ತನ್ನ ಶೇಷಾಯುಷ್ಯವನ್ನು ಯಾವ ವಿಧವಾಗಿ ಕಳೆಯಬೇಕು? ಈ ವಿಷಯಕ್ಕೆ ನೀವೇನಾದರೂ ಆಲೋಚಿಸಿರುವಿರೇನು?” ಎಂದು ಪ್ರಶ್ನೆ ಮಾಡಲು,

“ಜಹಗೀರದಾರರೇ, ವಿಚಾರವನ್ನೇನು ಮಾಡತಕ್ಕದ್ದಿದೆ? ಜನ್ಮ-ಜನ್ಮಾಂತರದ ಕರ್ಮಫಲದಿಂದಲೇ ಅವಳಿಗೀ ಬಾಲವೈಧವ್ಯ ಪ್ರಾಪ್ತವಾಗಿದೆ; ಇಲ್ಲದಿದ್ದರೆ ಈ ನಮ್ಮ ಮಾಯೆ ಇಷ್ಟೊತ್ತಿಗೆ ಸಂಸಾರದ ಮಧುರ ಫಲಗಳನ್ನು ಸೇವಿಸಹತ್ತುತ್ತಿದ್ದಳಲ್ಲವೆ?” ಎಂದು ನುಡಿದು ಶಿವದಾಸನು ಉಸಿರ್ಗರೆದ.

“ಹಾಗಾದರೆ ಸಂಸಾರಧರ್ಮವರ್ಜಿತಳಾದ ಇವಳು ಇನ್ನು ತನ್ನ ಆಯುಷ್ಯವನ್ನು ಹೇಗೆ ಕಳೆಯಬೇಕು?”,

"ಪತಿ-ಪತ್ನಿ ಧರ್ಮದಿಂದ ವಂಚಿತಳಾದ ಮಾತ್ರದಿಂದ ಇವಳಿಗೆ ಬೇರೆ ಸಂಸಾರೋಪಾಧಿಗಳು ಇರುವದಿಲ್ಲೆಂತಲ್ಲ; ಬೇಕಾದಷ್ಟಿರುತ್ತವೆ. ವೃದ್ಧರಾದ ಅತ್ತೆ-ಮಾವಂದಿರ ಸೇವಾ-ಶುಶ್ರೂಷೆಗಳಲ್ಲಿಯೂ ಭಾವ-ಮೈದುನರ ಸಂತತಿ ಪಾಲನ-ಪೋಷಣಗಳಲ್ಲಿಯೂ ನಿರತಳಾಗಲಿಕ್ಕೆ ಇವಳಿಗೆ ಅಸ್ಪದವಿರುತ್ತದೆ."

"ಸ್ತ್ರೀಯರು ಅವೆಲ್ಲ ಸಂಸಾರೋಪಾಧಿಗಳಲ್ಲಿ ಸಹಜವಾಗಿ ನಿರತರಾಗುವಂತಿದ್ದರೂ, ಪ್ರಿಯಕರನಿಲ್ಲದ ಆ ಸಂಸಾರ ಶಕಟ ಎಳೆಯಲಿಕ್ಕೆ ವಿಚಾರವಂತ ವಿಧವೆಯರಿಗೆ ಹುರುಪು ಬರುವದಿಲ್ಲ. ಅತ್ತೆ-ಮಾವಂದಿರೂ ಸಂಸಾರದ ಬೇರೆ ಪ್ರಮುಖರೂ ಪ್ರಸಂಗೋಪಾತ್ ಇವರನ್ನು ತುಸ ಜರೆದರಂತೂ ಕೆಲಸವೇ ಮುಗಿಯಿತು. ಅದ್ದರಿಂದ ಶಿವದಾಸರೇ, ಇವಳನ್ನು ಅಂಥ ಅನಿಶ್ಚಿತ ವಾತಾವರಣದ ಸಂಸಾರದಲ್ಲಿ ತೊಡಗಿಸುವದಕ್ಕಿಂತ, ಸದಾ ನಿಶ್ಚಿತವಾದೀ ಜಂಡಿ ಮಹಾಮಾಯೆಯ ಸಂಸಾರದಲ್ಲಿ ತೊಡಗಿಸಿ ಬಿಡುವದು ಒಳಿತೆಂದು ನನಗೆ ತೋರುತ್ತದೆ. ಈ ದೇವತೆಯ ಸೇವಾಸೂತ್ರಗಳಿಂದಲೇ ಇವಳ ತನುಮನಗಳಿಗೆ ನಿಜವಾದ ಸುಖ-ಶಾಂತಿಗಳು ದೊರೆತರೆ ದೊರೆಯುವ ಸಂಭವವಿರುತ್ತದೆ ಈ ಉದ್ದೇಶವನ್ನಿಟ್ಟುಕೊಂಡು ಸೀವೀ ಎದುರಿಗಿನ ವಿಶಾಲವಾದ ಗಂಗಾತೀರದಲ್ಲಿ ಒಂದು ದೇವತೆಯನ್ನು ಪ್ರತಿಷ್ಠಾಪನೆ ಮಾಡಿರಿ. ನಮ್ಮ ತಂಗಿ ಆ ದೇವಾಲಯದಲ್ಲಿ ವಾಸಿಸಿ ದೇವರ ಸೇವೆಯನ್ನೂ ದೀನ-ದುರ್ಬಲರಾದವರ ಸೇವೆಯನ್ನೂ ಮಾಡಲಿ. ನಾನು ಆ ದೇವಾಲಯವನ್ನು ಕಟ್ಟಿಸಲಿಕ್ಕೆ ಬೇಕಾಗುವಷ್ಟು ಹಣ ಕೊಡುವೆನಲ್ಲದೆ, ಆ ದೇವತೆಯ ಪೂಜಾ-ಪುರಸ್ಕಾರಗಳ ವಿನಿಯೋಗಕ್ಕಾಗಿಯೂ ದೀನ-ದುರ್ಬಲರ ಊಟ-ಉಪಚಾರಗಳ ಖರ್ಚಿಗಾಗಿಯೂ ಒಂದು ತಾಲೂಕಿನ ಉತ್ಪತ್ತಿಯನ್ನು ನಮ್ಮ ತಂಗಿಯ ಹೆಸರಿಗೆ ಇನಾಮು ಬರೆದು ಕೊಡುವೆನು. ನಮ್ಮ ತಂಗಿ ದೇವರನ್ನು ಆರಾಧಿಸಲಿ. ಅನಾಥ ಜನರನ್ನು ಸಂತೋಷಗೊಳಿಸಿದರೆ, ದೇವರ ಸಂತುಷ್ಟತೆಯು ತಾನೇ ಆಗುವದು; ದೀನ-ದುರ್ಬಲರಿಗೆ ಉಣಬಡಿಸುವದೇ ದೇವರಿಗೆ ನೈವೇದ್ಯವನ್ನರ್ಪಿಸೋಣ. ಅಂಥವರಿಗೆ ಬಟ್ಟೆ-ಬರೆಗಳನ್ನು ಕೊಟ್ಟರೆ ದೇವರಿಗೆ ವಸ್ತ್ರಾಭರಣಗಳನ್ನು ಕೊಟ್ಟಂತಾಗುವದು. ಅನಾಥರ ಕಷ್ಟವನ್ನು ಪರಿಹರಿಸುವದೇ ದೇವರ ಮುಖ್ಯ ಸೇವೆಯೆಂದು ನನ್ನ ನಿಶ್ಚಿತ ಮತವಾಗಿರುತ್ತದೆ. ಬ್ರಾಹ್ಮಣಶ್ರೇಷ್ಠರೇ, ಈ ನನ್ನ ಲೋಕಸೇವೆ-ದೇವಸೇವೆಗಳ ಕಲ್ಪನೆಯು ನಿಮಗೆ ಸಮ್ಮತವಾದರೆ, ನೀವು ನಮ್ಮ ತಂಗಿಯನ್ನು ಆ ಅಸ್ಥಿರವಾದ

ಸಂಸಾರದ ಕೊಳೆಪಾಟದಲ್ಲಿ ದೂಡುವದಕ್ಕಿಂತ, ಸ್ಥಿರವಾದ ಈ ದೇವತಾ ರಾಧನೆಯಲ್ಲಿ ತೊಡಗಿಸುವದು ತಕ್ಕದ್ದಾಗಿರುತ್ತದೆ."

ಗುಲಾಮ ಅಲಿಯ ಈ ಸ್ಫೂರ್ತಿದಾಯಕ ವಚನಗಳನ್ನು ಕೇಳಿ, ಶಿವದಾಸನು ಕುಳಿತ ಸ್ಥಳದಿಂದೆದ್ದು ಆ ಜಹಗೀರದಾರನನ್ನು ಆಲಿಂಗಿಸಿ:-"ಜಹಗೀರದಾರರೇ, ನಿಮ್ಮಲ್ಲಿಯ ಹಿಂದು-ಮುಸಲ್ಮಾನರ ವಿಷಯದ ಸಮತ್ವವು ಧನ್ಯವಾಗಿರುತ್ತದೆ!" ಎಂದಂದನು. ಜಹಗೀರದಾರನಾದರೂ ಶಿವದಾಸನನ್ನು ತನ್ನ ಬಾಹುದ್ವಯಗಳಿಂದ ದೃಢವಾಗಿ ಆಲಿಂಗಿಸಿದನು. ಆಗ ಅವರೀರ್ವರ ನೇತ್ರಗಳಿಂದ ಆನಂದಬಾಷ್ಪಗಳು ಹೊರಬಿದ್ದು ಸಂಗಮ ಸ್ಥಳದಲ್ಲಿ ಗಂಗಾ-ಯಮುನೆಗಳ ನೀರು ಒಟ್ಟಾಗಿ ಹರಿಯುವಂತೆ, ಅವು ಭೂಮಿಯ ಮೇಲೆ ಬೀಳುವಾಗ ಸಂಗಮ ಹೊಂದಿಯೇ ಬಿದ್ದವು.

ಅವರೀರ್ವರಲ್ಲಿ ಈ ಪ್ರಕಾರ ಸಂಭಾಷಣವಾದ ಕೆಲವು ದಿವಸಗಳಲ್ಲಿಯೇ ಗಂಗಾತೀರದ ವಿಶಾಲವಾದ ಸ್ಥಳದಲ್ಲಿ ಒಂದು ನೂತನ ಚಂಡಿಮಂಟಪ ಕಟ್ಟಲ್ಪಟ್ಟಿತು. ಆ ದೇವಾಲಯದ ಸುತ್ತಲೂ ನೇತ್ರಾನಂದಕರವಾದ ಹೂದೋಟವೂ, ದೇವಾಲಯಕ್ಕೆ ಹೊಂದಿ ದೀನ-ದುರ್ಬಲರ ವಾಸಕ್ಕಾಗಿ ಚಿಕ್ಕ-ದೊಡ್ಡ ಧರ್ಮಶಾಲೆಯಂಥ ಬೀಡಾರಗಳೂ ಪರಿಶೋಭಿಸಿದುವು. ಸುಮುಹೂರ್ತದಲ್ಲಿ ಶಿವದಾಸನು ದೇವತಾ ಪ್ರತಿಷ್ಠಾಪನೆ ಮಾಡಿದನು. ವಚನ ವಿತ್ತಂತೆ ಜಹಗೀರದಾರನು ಒಂದು ತಾಲೂಕಿನ ಆದಾಯವನ್ನು ಮಾಯಿಯ ಹೆಸರಿಗೆ ಬರೆಸಿಟ್ಟನು. ಆ ದೇವಾಲಯದಲ್ಲಿ ವಾಸಿಸಿ ಮಾಯಿಯು ದೇವತೆಯ ಆರಾಧನೆಯಲ್ಲಿಯೂ, ದೀನ-ದುರ್ಬಲರನ್ನು ಸಂತೋಷಿಸುವದರಲ್ಲಿಯೂ ತನ್ನ ಎಲ್ಲ ಶಕ್ತಿ-ಸಮಯಗಳನ್ನು ವಿನಿಯೋಗಿಸಲಾರಂಭಿಸಿದಳು.



## (೪)

ಎಷ್ಟೋ ವರ್ಷಗಳು ಕಳೆದವು. ಶಿವದಾಸನು ಮೃತ್ಯುಶಯ್ಯೆಯಲ್ಲಿ ಪವಡಿಸಿದ್ದನು. ಅವಸಾನ ಕಾಲಕ್ಕೆ ಅವನು ಗುಲಾಮ ಅಲಿಯನ್ನು ಕರೆಸಿಕೊಂಡು ಮಾಯೆಯ ಕೈಯನ್ನು ಅವನ ಕೈಯಲ್ಲಿತ್ತು, ಗದ್ಗದ ಕಂಠದಿಂದ ಏನೋ ಹೇಳಬೇಕೆಂದನು; ಆದರೆ ಅಷ್ಟರಲ್ಲಿ ಅವನ ವಾಣಿಯೇ ಕುಂಠಿತವಾಗಲು, ಸಾಶ್ರುನಯನದಿಂದ ಅವರೀರ್ವರ ಕಡೆಗೆ ನೋಡಹತ್ತಿದನು.

ಸಹೃದಯನಾದ ಗುಲಾಮ ಅಲಿಗೆ ಭ್ರಾತೃಸಮಾನನಾದ ಶಿವದಾಸನ ಅಂತರ್ಭಾವ ತಿಳಿದು ಬಂದಿತು. ಆಗ ಅವನು :—“ಬ್ರಾಹ್ಮಣಶ್ರೇಷ್ಠಾ, ಮಾಯೆಯ ಮಾಯೆಯನ್ನು ಪರಿತ್ಯಜಿಸಿ, ಇಷ್ಟದೇವತೆಯನ್ನು ಸ್ಮರಿಸುವವನಾಗು. ಮಾಯೆಯು ಈಗ ಮನುಷ್ಯಳಾಗಿ ಉಳಿದಿರುವದಿಲ್ಲ. ಅವಳು ನನ್ನ ಪರಮ ದೇವತೆಯಾಗಿರುತ್ತಾಳೆ. ನಾನು ಅವಳನ್ನು ರಕ್ಷಣೆಮಾಡುವೆನೆನ್ನುವದಕ್ಕಿಂತ, ಅವಳೇ ನನ್ನಂಥ ಸಾವಿರಾರು ಗುಲಾಮರನ್ನು ರಕ್ಷಿಸಲು ಸಮರ್ಥಳಾಗಿರುತ್ತಾಳೆ.’’

ಮುಸಲ್ಮಾನನ ಈ ವಚನಗಳನ್ನು ಕೇಳಿ, ಶಿವದಾಸನ ಅಂತರಂಗದೊಳಗಿನ ಮಾಯೆಯ ವಿಷಯದ ಮಾಯೆಯು ಕಡಿಯಲು, ಅವನ ಕಣ್ಣೊಳಗಿಂದ ಮಾಯಾಮುಕ್ತಿಪ್ರದವಾದ ಆನಂದಬಾಷ್ಪಗಳು ಸುರಿದವು. ಪರಕ್ಷಣದಲ್ಲಿಯೇ ಶಿವದಾಸನ ಇಹಪರ್ಯವಸಾನವಾಯಿತು. ಶಿವದಾಸನು ಉಲ್ಲಸಿತ ಮೊಗದಿಂದ ಪ್ರಾಣೋತ್ಕ್ರಮಣ ಮಾಡುವಾಗ ಗುಲಾಮ ಅಲಿಯು ಗದ್ಗದ ಕಂಠದಿಂದ:—“ಬಾಹ್ಮಣಶ್ರೇಷ್ಠರೇ, ನಡೆಯಿರಿ-ನಡೆಯಿರಿನ್ನು ಸ್ವರ್ಗಕ್ಕೆ. ಪರಕ್ಷಣದಲ್ಲಿ ಸ್ವರ್ಗಸುಖಗಳಲ್ಲಿ ನಿರತರಾಗುವ ನೀವು, ನಿಮ್ಮ ಗುಲಾಮನನ್ನು ಶೀಘ್ರವಾಗಿ ನಿಮ್ಮೆಡೆಗೆ ಬರಮಾಡಿಕೊಳ್ಳಲಿಕ್ಕೆ ಮರೆಯಬೇಡಿರಿ” ಎಂದು ಪ್ರಾರ್ಥಿಸಿದನು.

## [೫]

ಮುಂದೆ ಕೆಲ ದಿನಗಳ ತರುವಾಯ ಒಂದು ದಿನ ರಾತ್ರಿ ಗುಲಾಮ
ಅಲಿಯು ಆ ನೂತನ ಚಂಡಿಮಂಟಪದ ಪ್ರಾಂಗಣದಲ್ಲಿ ಯಾವನೊಬ್ಬ
ತರುಣ ಯುವನನ ರುಂಡವನ್ನು ತನ್ನ ಕೈಯೊಳಗಿನ ಹದನಾದ ಖಡ್ಗದಿಂದ
ಕತ್ತರಿಸಿ, ಒಳ್ಳೇ ತ್ವೇಷದಿಂದ ಆ ರುಂಡದ ಕಡೆಗೆ ನೋಡುತ್ತಿರಲು, ದೇವಿ
ಮಂದಿರದಿಂದ ಬರುತ್ತಿದ್ದ ಮಾಯೆಗೆ ಆ ಭೀಷಣ ದೃಶ್ಯವು ಕಾಣಿಸಿತು ಆಗ
ಅವಳು ಲಗುಬಗೆಯಿಂದ ಜಹಗೀರದಾರನೆಡೆಗೆ ಬಂದು:-"ಜಹಗೀರದಾರರೇ,
ಇದೇನು ಮಾಡಿದಿರಿ? ನಿಮ್ಮ ಸರ್ವಸ್ವವನ್ನೂ ಘಾತಮಾಡಿಕೊಳ್ಳುವ
ಇದೆಂಥ ನಿಂದ್ಯ ಕೆಲಸವನ್ನು ಮಾಡಿಬಿಟ್ಟಿರಲ್ಲ! ಈ ನಿಮ್ಮ ದುಷ್ಕೃತಿಗೆ ಎಂಥ
ದುಷ್ಟ ಫಲಗಳುಂಟಾದಾವೆಂದು ಯಾರು ಹೇಳಬೇಕು? ನಿಮ್ಮ ಕೈಯಲ್ಲಿ ಹಿಡಿ
ದಿರುವ ಈ ರುಂಡಕ್ಕೆ ಪ್ರತಿಯಾಗಿ ನೀವು ನಿಮ್ಮ ಸ್ವಂತದ ರುಂಡವನ್ನು ಅರ್ಪಿ
ಬೇಕಾಗುವದಲ್ಲದೆ, ನಿಮ್ಮ ಆಸ್ತಿ-ಪಾಸ್ತಿಗಳೂ, ಪ್ರಿಯಂಕರ ಪ್ರಜಾಗಣವೂಸ
ಮಣ್ಣುಪಾಲಾಗುವ ಪ್ರಸಂಗ ಒದಗಿತಲ್ಲ? ಈ ಸಹಸ್ರಶೀರ್ಷದ ಕಾಲಕೂಟ
ನನ್ನು ನೀವೇಕೆ ತಡವಿದಿರಿ? ನನ್ನನ್ನು ರಕ್ಷಿಸುವ ಸಲುವಾಗಿ ನೀವೀ ನಿಂದ್ಯ
ಕೆಲಸವನ್ನು ಕೈಕೊಳ್ಳತಕ್ಕದ್ದಿದ್ದಿಲ್ಲ ನನಗೆ ಇಂಥ ನೀಚರಿಂದ ಆಗುವದೇನು?
ನಮ್ಮ ಮಹಾಮಾಯೆಯು ಎಂಥ ದುರ್ಧರ ಸಂಕಟದಿಂದಲಾದರೂ ನನ್ನನ್ನು
ರಕ್ಷಿಸಲು ಸಮರ್ಥಳಾಗಿರುತ್ತಾಳೆ. ಹೀಗಿರಲು, ವಿಕಾರವಶರಾಗಿ ನೀವಿದೆಂಥ
ಹೇಸಿ ಕೆಲಸ ಮಾಡಿರುವಿರಲ್ಲ? " ಎಂದು ನುಡಿದಳು.

ತುಸ ಶಾಂತನಾಗಿ ಗುಲಾಮ ಅಲಿಯು :—"ತಂಗೀ, ನೀನು ಹೀಗೆ
ಹೇಳುವದು ಸ್ವಾಭಾವಿಕವಾಗಿರುತ್ತದೆ; ಆದರೆ ನಾನು ನನ್ನ ಭ್ರಾತೃವಾದ ಶಿವ
ದಾಸನಿಗೆ ಮರಣಕಾಲಕ್ಕೆ ಕೊಟ್ಟವಚನಪಾಲಿಸುವದಕ್ಕೆಂದು ನನ್ನೀಕೃತಿಯು
ಯಥಾರ್ಥವಾಗಿರುತ್ತದೆ ನಿನ್ನ ಮನೋಧರ್ಮದ ಪ್ರಕಾರ ನಿನ್ನನ್ನು ರಕ್ಷಿಸು
ವವಳೂ ನಾಶಪಡಿಸುವವಳೂ ಮಹಾಮಾಯೆಯೇ ಎಂದು ನೀನನ್ನುವದು
ಯೋಗ್ಯವಾಗಿರುತ್ತದೆ; ಆದರೆ ಕೇವಲಸಂಸಾರೋಪಾಧಿಗಳಿಂದ ಆವರಿಸಲ್ಪಟ್ಟ
ನಾವು-ಸಂಸಾರಿಗಳು, ಎಲ್ಲ ವಿಷಯದಲ್ಲಿಯೂ ದೇವರಮೇಲೆ ಭಾರಹೊರಿಸು
ವದಿಲ್ಲ ನಮ್ಮಕೈಯಿಂದ ನೀಗುವ ಕೆಲಸಗಳನ್ನೆಲ್ಲ ನಾವೇ ಮಾಡುತ್ತೇವೆಂದು
ಅಭಿಮಾನ ವಹಿಸಿ, ಕೈಲಾಗದ ಕೆಲಸಗಳ ಭಾರವನ್ನು ಮಾತ್ರ ನಿರಭಿಮಾನ

ದಿಂದ ದೇವರ ಮೇಲೆ ಹೊರಿಸಿ ಬಿಡುತ್ತೇವೆ. ಆದ್ದರಿಂದ ನಮ್ಮ ಈ ದ್ವಿಧಾವೃತ್ತಿಯಿಂದ ನಮಗೆ ಆಗಾಗ್ಗೆ ಎಷ್ಟೋ ಸಂಕಟಗಳು ಪ್ರಾಪ್ತವಾಗಿ, ನಾವು ಅವುಗಳ ಪ್ರಖರತೆಗೊಳಗಾಗಬೇಕಾಗುತ್ತದೆ. ಪ್ರಸ್ತುತದಲ್ಲಿ ನಾನು ನಿನ್ನನ್ನು ಸಂರಕ್ಷಿಸುವನೆಂಬ ಅಭಿಮಾನ ವಹಿಸಿರುವದರಿಂದಲೇ ನನ್ನಿಂದ ಈ ಹೇಯ ಕೃತ್ಯವು ಸಂಘಟಿಸಿರುತ್ತದೆ. ತಂಗೀ, ಮಾಯಾ, ಸಂಸಾರ ಧರ್ಮ ಪಾಲಿಸಲಿಕ್ಕೆ ಹೊಣೆಗಾರನಾದ ನಾನು, ನಿನ್ನ ಅಜ್ಜನಿಗೆ ಕೊಟ್ಟ ವಚನ ಪಾಲಿಸುವದಕ್ಕಾಗಿ, ನನ್ನ ಇಮಾನ ಕಾಯ್ದುಕೊಳ್ಳುವದಕ್ಕಾಗಿ ತಿಳಿದೂ ತಿಳಿದು ಈ ನೀಚ ಕಾರ್ಯಕ್ಕೆ ಪ್ರವೃತ್ತನಾಗಿರುತ್ತೇನೆ. ಲೋಕದಲ್ಲಿ ಹುಟ್ಟಿ ಬಂದ ಬಳಿಕ ಕೇವಲ ದೇವರ ದಾಸರಾಗಿ ಅವನ ಆಜ್ಞೆಯಂತೆ ನಡೆಯುವ ನಿನ್ನಂಥ ಮನುಷ್ಯರು ಉತ್ತಮ ಕೋಟಿಯಲ್ಲಿ ಗಣ್ಯರಾಗುತ್ತಾರೆ. ಅವರು ದೇವರ ಆಜ್ಞೆಯ ವಿನಃ ತಮ್ಮ ಯಾವ ಮನೋವಿಕಾರಗಳಿಗೂ ವಶರಾಗುವದಿಲ್ಲ; ಆದರೆ ತಂಗೀ, ನಮ್ಮಂಥ ಪಾಮರರು ವಿವಕ್ಷಿತ ಪ್ರಸಂಗಗಳಲ್ಲಿ ದೇವರ ಆಜ್ಞೆಯ ಮೇರೆಗೆ ನಡೆಯಬೇಕೆಂದೂ, ಮಿಕ್ಕ ಪ್ರಸಂಗಗಳಲ್ಲಿ ಸಂಸಾರಧರ್ಮಪಾಲನೆಗಾಗಿ ನಮ್ಮ ಬುದ್ಧಿ ತೋಚಿದಂತೆ ನಡೆಯಬೇಕೆಂದೂ ಗೊತ್ತು ಮಾಡಿಕೊಂಡು, ಆದರಂತೆ ನಡೆಯುತ್ತ ಬಂದಿರುವರು. ಹೀಗೆ ಯಥಾ ರೀತಿಯಾಗಿ ಸಂಸಾರ ಸಾಗಿಸುವದಾದರೂ ಕಡಿಮೆ ಯೋಗ್ಯತೆಯ ಕೆಲಸವೆಂತಲ್ಲ; ಆದರೆ ಈ ಸಂಸಾರ ಧರ್ಮಪಾಲನ ಮಾಡುವಾಗ ಸಂಸಾರಿಯು ಸದಭಿಮಾನ, ಸದಾಚಾರ, ಸನ್ಮಾರ್ಗ ಪ್ರವರ್ತನೆ ಮುಂತಾದ ಸದ್ಗುಣಗಳಿಂದ ಪೋಷಿತನಾಗಿರಬೇಕಲ್ಲದೆ ದುರಭಿಮಾನ, ದುರಾಚಾರ, ದುರ್ಮಾರ್ಗನಿರತತೆ ಮೊದಲಾದ ದುರ್ಗುಣಗಳಿಂದ ಆವರಿಸಿರಲಾಗದು. ತಂಗೀ, ಮಾಯಾ, ಸಂಸಾರಿಗಳಲ್ಲಿ ಎಲ್ಲ ಸದ್ಗುಣಗಳಿಗಿಂತಲೂ ಇಮಾನ ಕಾಯುವ ಶ್ರೇಷ್ಠ ಗುಣವೊಂದಿದ್ದರೆ, ಅವನು ಇಹ-ಪರಗಳಲ್ಲಿ ಅಖಂಡವಾದ ಸುಖಕ್ಕೆ ಪಾಲುಗಾರನಾಗುವನೆಂದು ನನ್ನ ದೃಢವಿಶ್ವಾಸವಿರುವದರಿಂದ, ನನ್ನ ಇಮಾನ ಕಾಯುವದಕ್ಕಾಗಿಯೇ ಸದ್ಯಕ್ಕೆ ನಾನೀ ನಿಂದ್ಯಕೆಲಸಮಾಡಿರುತ್ತೇನೆ. ದೃಶ್ಯತಃ ಇದರಿಂದ ಎಷ್ಟೋ ದುಷ್ಫಲಗಳುಂಟಾಗುವವೆಂದು ಅನಿಸಿದರೂ, ನನ್ನ ಖಂಬೀರವಾದ ಮನಸ್ಸಿಗೆ ಅವಾವುಗಳ ಲೇಪವಾಗಲಾರವೆಂದು ನನ್ನ ಮನೋಭಾವನೆಯಾಗಿರುತ್ತದೆ.”

ಶೋಣಿತ ರಂಜಿತವಾದ ಗುಲಾಮ ಅಲಿಯ ಎರಡೂ ಕೈಗಳನ್ನು ತನ್ನ ಕೈಗಳಿಂದ ಹಿಡಿದು, ಅಶ್ರುಪೂರ್ಣವಾದ ತನ್ನ ದೃಷ್ಟಿಯನ್ನು ಅವನ ದೃಷ್ಟಿ

ಯೊಡನೆ ಬೆರೆಸಿ, ಮಾಯೆಯು:-"ಜಹಗೀರದಾರರೇ, ನನ್ನನ್ನು ಕ್ಷಮಿಸಿರಿ; ಬಿರಿನುಡಿ ನುಡಿದು ಸುಮ್ಮನೆ ನಿಮಗೆ ವ್ಯಥೆ ಕೊಟ್ಟದ್ದಕ್ಕಾಗಿ ಸಂಪೂರ್ಣವಾಗಿ ಕ್ಷಮಿಸಬೇಕೆಂದು ಈ ನಿಮ್ಮ ದೀನ ಮಾಯೆಯು ಬೇಡಿಕೊಳ್ಳುತ್ತಾಳೆ. ಇಮಾನವನ್ನೇ ಶ್ರೇಷ್ಠವೆಂದು ತಿಳಿದಿರುವ ನೀವು, ಎಂಥ ಪ್ರಸಂಗಕ್ಕೂ ಅಂಜದೆ ನಿಮ್ಮ ಇಮಾನವನ್ನು ಕಾದುಕೊಂಡಿರುತ್ತೀರಿ. ಜಹಗೀರದಾರರೇ, ಅತ್ತ ನೋಡಿರಿ; ಅಲ್ಲಿ ಮಹಾಮಾಯೆ ನಿಂತಿರುತ್ತಾಳೆ ಆಕೆಯು ಸಾಕ್ಷಿಯಾಗಿ ನೀವು ನಿಮ್ಮ ಇಮಾನವನ್ನು ಕಾದುಕೊಂಡಿರುತ್ತೀರಿ. ನಿಮ್ಮ ಪೂಜ್ಯ ಇಮಾನವನ್ನು ಕಾಯುವದಕ್ಕಾಗಿ ನೀವೇ ಮಹತ್ಸಂಕಟವನ್ನು ನಿಮ್ಮ ಮೇಲೆ ಎಳೆಕೊಂಡಿದ್ದರೂ, ಆ ಮಹಾಮಾಯೆಯು ಈ ಸಂಕಟದಿಂದ ನಿಮ್ಮನ್ನು ಸುಲಭವಾಗಿ ಪಾರುಗಾಣಿಸುವಳು!"

ಮಾಯೆಯು ಈ ಭಾಷಣವನ್ನು ಕೇಳಿ ಗುಲಾಮ ಅಲಿಯ ಕೈಖಡ್ಗವು ಕಳಚಿಬಿತ್ತು ಕೂಡಲೆ ಅವನು ತನ್ನ ರಕ್ತರಂಜಿತ ಹಸ್ತಗಳನ್ನು ಮಾಯೆಯ ತಲೆಯಮೇಲಿಟ್ಟು:—ತಂಗೀ, ನನ್ನ ಇಮಾನ ರಕ್ಷಿಸಲಿಕ್ಕೆ ಸಹಾಯಕಾರಣಿ ಯಾದ ಆ ನಿನ್ನ ಮಹಾ ಮಾಯೆಯು ನನಗೇನೂ ಕಡಿಮೆ ಮಾಡಿರುವದಿಲ್ಲ. ಧನ, ದೌಲತ್ತು, ಅಧಿಕಾರ ಮುಂತಾದವುಗಳು ಬೇಕಾದಷ್ಟಿರುತ್ತವೆ; ಅಲ್ಲದೆ ಗೃಹಸೌಖ್ಯಕ್ಕೂ ಕೊರತೆಯಿಲ್ಲ. ಆದ್ದರಿಂದ ನನಗೆ ಆಕೆಯ ಇನ್ನಾವ ಕೃಪಾ ಪೇಕ್ಷೆಯೂ ಇರುವದಿಲ್ಲ. ಇಷ್ಟೇ ಅಲ್ಲ, ಅವಳನ್ನು ಪ್ರಾರ್ಥಿಸಿ, ಈ ಮಹ ತ್ಸಂಕಟದಿಂದ ಮುಕ್ತನಾಗಬೇಕೆಂಬ ಹಂಬಲ ಕೂಡ ನನಗಿರುವದಿಲ್ಲ; ಆದರೆ ನಿಷ್ಕಾಮದಿಂದ ಆ ಜಗದ್ಧಾತ್ರಿಯನ್ನು ಮನ್ನಿಸಿ ಕೊಂಡಾಡುವದು ನನ್ನ ಕರ್ತವ್ಯವಾಗಿರುವದರಿಂದ, ಮಾಯಾ, ಬಾ; ಆ ನಿನ್ನ ಮಹಾ ಮಾಯೆಯ ಅಡಿದಾವರೆಗಳಿಗೆರಗುವಾ ಬಾ ಎಂದು ಗದ್ಗದಕಂಠದಿಂದನುಡಿದು ಗುಲಾಮ ಅಲಿಯು ಮಾಯೆಯೊಡನೆ ಎದುರಿಗಿನ ಚಂಡೀಮಂಟಪಕ್ಕೆ ತೆರಳಿದನು.

ಯಾವ ಯುವಕನ ರುಂಡವು ಗುಲಾಮ ಅಲಿಯ ಖಡ್ಗದಿಂದ ಧರೆಗಿಳಿ ಸಲ್ಪಟ್ಟಿತ್ತೋ ಆ ಹತಭಾಗಿಯು ಬಂಗಾಲದ ನವಾಬನಾದ ಮಜೀದಖಾನನ ಮಕ್ಕಳಲ್ಲಿ ಒಬ್ಬನಾದ ಯಾಕೂಬಖಾನನು. ಈ ಯಾಕೂಬಖಾನನ ಕಡೆಗೇ ಆಗ ಗುಲಾಮ ಅಲಿಯ ಜಹಗೀರನ ಇಲಾಖೆಯ ಫೌಜದಾರಿಯ ಕೆಲಸ ವಿತ್ತು. ಸರಕಾರೀ ಕೆಲಸದ ಸಲುವಾಗಿ ಕೆಲವು ದಿನಗಳಿಂದ ಯಾಕೂಬನು ಗುಲಾಮಅಲಿಯ ಪಟ್ಟಣಕ್ಕೆ ಬಂದಿದ್ದನು. ಬಂಗಾಲದ ನವಾಬನು ಈ ಜಹ

ಗೀರದಾರನ ಸ್ವಾಮಿಯು. ಸ್ವಾಮಿಪುತ್ರನು ಬಂದಿರಲು, ಗುಲಾಮು ಆಲಿಯು ಅನೇಕ ಪ್ರಕಾರದ ಉತ್ಸವಾದಿಗಳಿಂದ ಅವನನ್ನು ಬರಮಾಡಿಕೊಂಡು, ಉಪ ಚರಿಸಿದನು. ಒಂದು ದಿನ ಆ ನವಾಬ ಪುತ್ರನು ತನ್ನ ಕೆಲ ಜನ ಗೆಳೆಯ ರೊಡನೆ ನೌಕಾವಿಹಾರಕ್ಕೆ ಹೊರಟನು. ಗುಲಾಮು ಆಲಿಯು ಶಿವದಾಸನಿಂದ ಮಾಯೆಯ ಸಲುವಾಗಿ ನಿರ್ಮಿಸಿದ ಗಂಗಾತೀರದ ನೂತನ ಚಂಡೀ ಮಂಟ ಪದ ಬಳಿಗೆ ಅವನ ಆ ನೌಕೆ ಬಂದಾಗ ಸಾಯಂಕಾಲದ ಸ್ನಾನಕ್ಕಾಗಿ ಮಾಯೆಯು ಅಲ್ಲಿಯ ಘಾಟಿಗೆ ಹೋಗಿದ್ದಳು. ಶುಭ್ರವಸನ ಪರಿವೇಷ್ಟಿತಳೂ ಕಪ್ಪಾದ ಉದ್ದನ್ನ ಕೂದಲುಳ್ಳವಳೂ, ಬ್ರಹ್ಮಚರ್ಯದಿಂದ ಮಿನುಗುವ ಸ್ವರೂಪದವಳೂ ಆದ ಮಾಯೆಯ ಸುಂದರ ರೂಪದಿಂದ ಆ ಕುಟಿಲ ಹೃದ ಯದ ನಬಾಬಪುತ್ರನು ಮುಗ್ಧನಾದನು. ನಂತರ ಸಂಗಡಿಗರ ಅನುಸಂಧಾನ ದಿಂದ ಅವನಿಗೆ ಮಾಯೆಯ ಜೀವನ ಚರಿತ್ರ ತಿಳಿದು ಬಂದಿತು. ಅವಳು ಒಳ್ಳೇ ನಿಕಟ ಬ್ರಹ್ಮಚಾರಿಣಿಯೆಂಬದು ಅವನಿಗೆ ತಿಳಿದರೂ, ಅವನ ಮನಸ್ಸಿ ನಲ್ಲಿ ಹುಟ್ಟಿದ ಆಕೆಯ ವಿಷಯದ ಲಾಲಸೆ ಕಡಿಮೆಯಾಗಲಿಲ್ಲ. ಆಗ ಅವನು ಅವಳನ್ನು ಆ ಕಠಿಣ ವ್ರತದಿಂದ ಬಿಡಿಸಿ ತನ್ನವಳನ್ನಾಗಿ ಮಾಡಿಕೊಂಡರೆ, ತನಗೆ ಕೊಂಚವೂ ಪಾಪ ತಟ್ಟದೆ, ಒಬ್ಬ ಅನಾಥ ಹಿಂದೂ ವಿಧವೆಯ ಕಠೋರ ನಿಷ್ಫಲ ಜೀವನವನ್ನು ಸುಖಮಯವಾಗಿ ಮಾಡಿದ ಪುಣ್ಯವು ಲಭಿಸಿ, ಉಭಯತರೂ ಸುಖಿಗಳಾಗುವೆವೆಂದು ಭಾವಿಸಿದನು; ಆದರೆ ಈ ತನ್ನ ಸದ್ಭಾವನೆಗೆ ಗುಲಾಮು ಆಲಿಯು ಸಮ್ಮತಿಸಲಿಕ್ಕಿಲ್ಲವೆಂಬದೂ, ತಾನು ಆಕೆ ಯನ್ನು ಹರಣ ಮಾಡಲೆತ್ನಿಸಿದರೆ, ಈ ಧೀರ ಆಲಿಯು ತನಗೆ ವ್ಯತ್ಯಯು ವನ್ನುಂಟುಮಾಡಬಹುದೆಂಬದೂ ಅವನಿಗೆ ಚೆನ್ನಾಗಿ ಗೊತ್ತಿತ್ತು. ಅದರಿಂದ ಅವನು ತನ್ನ ಆ ಕೃತ್ಯದ ಸುದ್ದಿ ಬೇರೆ ಯಾರಿಗೂ ತಿಳಿಯದ ಹಾಗೆ ಗುಪ್ತ ವಾಗಿರಿಸಿದನು. ಒಂದು ದಿನ ಮಧ್ಯರಾತ್ರಿಯಲ್ಲಿ ನೌಕಾವಿಹಾರಕ್ಕೆಂದು ಹೊರಟ ಆತನು ಆ ಚಂಡೀ ಮಂಟಪಕ್ಕೆ ಬಂದನು; ಆದರೆ ಈ ಗುಪ್ತ ಸುದ್ದಿಯು ಅವನ ಸೈನಾತಿನೊಳಗಿನ ಒಬ್ಬ ವೃದ್ಧ ಅಧರ್ಮಭೀರುವಿಗೆ ಗೊ- ತ್ತಾದ ಕೂಡಲೆ, ಅವನು ಆಗಲೆಬಂದು ಅದನ್ನು ಗುಲಾಮುಆಲಿಗೆ ತಿಳಿಸಿದನು.

ಮಾಯೆಯನ್ನು ನವಾಬಪುತ್ರನು ಭ್ರಷ್ಟಗೊಳಿಸುವ ಹವ್ಯಾಸದಲ್ಲಿರುವ ನೆಂಬ ಸುದ್ಧಿ ತಿಳಿದ ಕೂಡಲೆ ಗುಲಾಮು ಆಲಿಯು ಸಿಟ್ಟಿನಿ ಬೆಂಕಿಯಾದನು! ಅವನು ಆ ಕ್ಷಣವೇ ತನ್ನ ಎಲ್ಲ ದಂಡಾಳುಗಳನ್ನು ಸಶಸ್ತ್ರವಾಗಿ ಹೊರ

ಡಿಸಿಕೊಂಡು ಬರಲಿಕ್ಕೆ ತನ್ನ ದಂಡಿನ ಮುಖ್ಯಸ್ತನಿಗೆ ತಿಳಿಸಿ, ತಾನು ಹಿರಿದ ಕತ್ತಿಯನ್ನು ಹಿಡಕೊಂಡು ತ್ವರಿತಗತಿಯಿಂದ ಆ ದೇವಾಲಯವನ್ನು ಹೊಕ್ಕು ನವಾಬಪುತ್ರನ ಅನುಚರರನ್ನು ಹೊಡೆದೋಡಿಸಿ, ಇನ್ನು ಮಾಯೆಯನ್ನು ಹಿಂದಿನಿಂದ ಹೋಗಿ ಹಿಡಿದೆಳೆಯಲಿಕ್ಕೆ ಹವಣಿಸಿದ್ದ ಆ ಯಾಕೂಬಖಾನನ ರುಂಡವನ್ನು ಮೇಲೆ ವಿವರಿಸಿದಂತೆ ಮುಂಡದಿಂದ ಬೇರೆ ಮಾಡಿದನು!

(೬)

ನವಾಬ-ಪುತ್ರ ಯಾಕೂಬನನ್ನು ಸಂಹರಿಸಿದ ಮರು ದಿವಸವೇ ಗುಲಾಮ ಅಲಿಯು ಬಂಗಾಲದ ನವಾಬನಾದ ಮಜೀದಖಾನನಿಗೆ ಒಂದು ಪತ್ರ ಬರೆದನು. ಅದರಲ್ಲಿ ಅವನು ಯಾಕೂಬಖಾನನ ನಿಂದ್ಯ ಹಾಗು ತಿರಸ್ಕರಣೀಯ ಕೃತ್ಯವನ್ನೂ, ತಾನು ಅದನ್ನು ಸಹಿಸಲಾರದೆ ಅವನ ಕೊಲೆ ಮಾಡಿದ್ದನ್ನೂ, ಅವನ ಅನುಚರರನ್ನು ತನ್ನ ಅಲೀಬಾಗ ಸಂಸ್ಥಾನದಿಂದ ಹದ್ದುಪಾರು ಮಾಡಿದ್ದನ್ನೂ ಕೊಂಚವೂ ಮರೆಮಾಜದಂತೆ ವಿವರಿಸಿದ್ದನು ಇದೇ ಕಾಲಕ್ಕೆ ಬಂಗಾಲ ಪ್ರಾಂತವನ್ನು ಗೆದ್ದುಕೊಳ್ಳುವ ಉದ್ದೇಶಕ್ಕಾಗಿ ದಿಲ್ಲಿಯ ಅಕಬರ ಬಾದಶಹನು ಮಾನಸಿಂಹ ಸರದಾರನನ್ನು ದೊಡ್ಡ ದಂಡಿನೊಡನೆ ಆ ಪ್ರಾಂತಕ್ಕೆ ಕಳಿಸಿದ್ದನು. ಈ ಸಂಧಿಯನ್ನು ಸಾಧಿಸಿ, ಅಲೀಬಾಗ ಸಂಸ್ಥಾನ ಹದ್ದಿನಿಂದ ಹೊರಹೊರಡಿಸಲ್ಪಟ್ಟ ಯಾಕೂಬನ ಅನುಚರರು ನವಾಬ ಬಳಿಗೆ ಬಂದು ಅವನಿಗೆ ಇಲ್ಲದ್ದೊಂದು ಸುಳ್ಳು ಸುದ್ದಿ ಹುಟ್ಟಿಸಿ ಹೇಳಿ ಸ್ವಪುತ್ರವಧದ ವಾರ್ತೆ ಕೇಳಿ ಮೊದಲೇ ಸಂತಪ್ತನಾಗಿದ್ದ ಅವನನ್ನು ಮತ್ತಿಷ್ಟು ರೇಗಿಗೆಬ್ಬಿಸಿದರು. ಆ ನೀಚ ಅನುಚರರು ಹೇಳಿದ್ದೇನಂದರೆ, "ಗುಲಾಮ ಅಲಿಯು ನವಾಬನ ವಿರುದ್ಧವಾಗಿ ರಾಜಾ ಮಾನಸಿಂಗನೊಡನೆ ಗುಪ್ತ ಸಂಧಾನ ನಡೆಸಿರುವನು. ನವಾಬಪುತ್ರನಾದ ಯಾಕೂಬನು ಅವನ ಈ ಕಪಟಸೂತ್ರವನ್ನು ಬೈಲಿಗೆ ಎಳೆದನು. ಅದರಿಂದ ಕ್ರುದ್ಧನಾದ ಗುಲಾಮ ಅಲಿಯು ಯಾಕೂಬನನ್ನು ದ್ವೇಷದಿಂದ ಸಂಹರಿಸಿ, ಆ ಕಪಟ ಸಂಗತಿಯನ್ನು ಬಲ್ಲಂಥ ನಮ್ಮನ್ನು ತನ್ನ ಸಂಸ್ಥಾನೀ ಇಲಾಖೆಯಿಂದ ಹದ್ದುಪಾರು ಮಾಡಿಸಿರುವನು"

ಯಾಕೂಬನ ಆ ಅನುಚರರು ಸುದ್ದಿ ತಿಳಿಸಿದ ಮರು ದಿವಸ ಗುಲಾಮ ಅಲಿಯ ಹಸ್ತಲಿಖಿತ ಪತ್ರ ನವಾಬನ ಕೈಸೇರಿತು; ಆದರೆ ಆ ಪತ್ರವನ್ನೋದಿ ತಿಳಕೊಳ್ಳುವದಕ್ಕಿಂತ ಮೊದಲೇ ಅಲ್ಲಿ ನಡೆದ ಎಲ್ಲ ಸಂಗತಿಗಳು

ಮೇಲೆ ವಿವರಿಸಿದಂತೆ ಅನುಚರರ ಮುಖಾಂತರ ನವಾಬನಿಗೆ ತಿಳಿದದ್ದರಿಂದ ಮೊದಲೇ ಅವಿಶ್ವಾಸಿಯೂ ಕುಟಿಲನೂ ಆದ ಅವನು ಸರಳ ಹೃದಯದ ಗುಲಾಮ ಅಲಿಯ ಆ ಪತ್ರದ ಸಂಗತಿಯನ್ನು ನಿಜವೆಂದು ತಿಳಿಯದೆ,ಅದಕ್ಕೆ ಮಹತ್ವ ಕೊಡಲಿಲ್ಲ. ನವಾಬನು ಬಹು ದೊಡ್ಡ ಸೈನ್ಯವನ್ನು ಅಲೀಬಾಗ ಸಂಸ್ಥಾನಕ್ಕೆ ದಾಳಿ ಮಾಡುವದಕ್ಕೆಂದು ರವಾನಿಸಿ, ಗುಲಾಮ ಅಲಿಯನ್ನೂ ತನ್ನ ಮಗನ ವಧಕ್ಕೆ ಕಾರಣಳಾದ ಮಾಯೆಯನ್ನೂ ಹಿಡಿತರಬೇಕೆಂದೂ ಅವನ ವಾಡೆಯನ್ನೂ ಆ ನೂತನ ಚಂಡಿಮಂಟಪವನ್ನೂ ಸುಟ್ಟು ಸೂರೆ ಗೊಳ್ಳಬೇಕೆಂದೂ ಆ ದಂಡಿನ ಮುಖ್ಯಸ್ಥನಿಗೆ ಕಟ್ಟಪ್ಪಣೆ ಮಾಡಿದನು.

ಮಜೀದಖಾನನು ದೊಡ್ಡಮನಸ್ಸಿನವನಿದ್ದಿಲ್ಲ. ತನ್ನ ಕೈಕೆಳಗಿನವರ ಪ್ರತಿಯೊಂದು ಸಣ್ಣ ಪುಟ್ಟ ತಪ್ಪುಗಳಿಗೂ ಅವನು ಸೇಡು ತೀರಿಸಿಕೊಳ್ಳದೆ ಬಿಡುತ್ತಿದ್ದಿಲ್ಲ. ಇಂಥ ಕಾಲಕೂಟ ಹೃದಯದ ನವಾಬನು ತನ್ನ ಮಗನ ಕೊಲೆಯ ಸೇಡು ತೀರಿಸಿಕೊಳ್ಳದೆ ಬಿಡುವನೆ? ಮೇಲಾಗಿ ಅವನು ಚಾಡಿ ಖೋರರ ಮಾತಿಗೆ ಮರುಳಾಗುವಂಥ ಹಗುರ ಕಿವಿಯುವನೂ ಆಗಿದ್ದನು-ಅಂದ ಮೇಲೆ ಕೇಳುವದೇನು? ಚೇಳು ಕಚ್ಚಿದಮಂಗನಿಗೆ ಸೆರೆಕುಡಿಸಿದಂತೆಯೇ ಸರಿ! ನವಾಬನ ಈ ಎಲ್ಲ ಹುಟ್ಟುಗುಣಗಳು ಗುಲಾಮಅಲಿಗೆ ಚೆನ್ನಾಗಿಗೊತ್ತಿದ್ದವು. ಅದರಿಂದ ಅವನು ಯಾಕೂಬನ ಕೊಲೆಗೈದ ಉತ್ತರ ಕ್ಷಣದಿಂದಲೇ ನವಾಬ ನಿಂದ ಉದ್ಭವಿಸಬಹುದಾದ ಸಂಕಟಕ್ಕೆ ಯಾವ ಬಗೆಯಾಗಿ ಎದುರಾಗಬೇ-ಕೆಂಬದನ್ನು ಚಿಂತಿಸಹತ್ತಿದ್ದನು ಈ ಪ್ರಸಂಗದಲ್ಲಿ ತಮ್ಮ ಪೂರ್ವಜರಿಂದ ಸಂಪಾದಿಸಲ್ಪಟ್ಟ ಈ ಜಹಗೀರನ್ನೂ, ಅದರ ಸ್ಮೃತಿಯನ್ನು ತಂದುಕೊಡುವ ಈ ಪುಣ್ಯಮಯ ವಾಡೆಯನ್ನೂ, ಅದರಂತೆ ತಮ್ಮಪ್ರೇಮಲ ಪ್ರಜಾಸಮೂಹ ವನ್ನೂ ತನ್ನಿಂದ ರಕ್ಷಿಸು ,, ದಾಗುವದೋ ಇಲ್ಲವೋ ಎಂಬವಿಷಯಕ್ಕೆಅವನು ಬಹುಕಾಲದ ವರೆಗೆ ಆಲೋಚಿಸಿದನು; ಆದರೆ ಅವನಿಗೆ ಯಾವ ವಿಚಾರವೂ ಬಗೆ ಹರಿಯಲೊಲ್ಲದು; ಯಾಕಂದರೆ ಅವನ ಸಂಸ್ಥಾನದ ದಂಡಿನ ಕಾಲಾಳು, ಸವಾರರು, ತೋಫು ಮುಂತಾದವುಗಳ ಪ್ರಮಾಣವು ನವಾಬನ ದಂಡಿನ ಪ್ರಮಾಣದ ಮಾನದಿಂದ ಹನುಮಂತ ಮುಂದೆ ಹಾರ ಗುಬ್ಬಿಯಂತೆ ಅತ್ಯ ಲ್ಪವೇ ಸರಿ! ಎಂಬದು ಅವನಿಗೆ ಗೊತ್ತಿತ್ತು. ಇನ್ನು ಈ ನಿಕರದ ಸಮಯದಲ್ಲಿ ಸಹಾಯಕ್ಕಾಗಿ ಕರೆದರೆ ತನ್ನ ಸಂಸ್ಥಾನದೊಳಗಿನ ಹಿಂದೂ-ಮುಸಲ್ಮಾನರಾದ ಎಲ್ಲ ಆಬಾಲ ವೃದ್ಧರು ಯಾವ ನೆವವನ್ನೂ ಹೇಳದೆ ಆತ್ಮಸಂತೋಷದಿಂದ

ಬಂದು ತನ್ನ ದಂಡಿನಲ್ಲಿ ಸೇರಬಹುದು; ಆದರೆ ರಣವಿದ್ಯೆಯನ್ನು ಏನೂ ಅರಿಯದವರೂ ಅಸ್ತ್ರವಿಹೀನರೂ ಆದ ಈ ತನ್ನ ಪ್ರೇಮಲ ಪ್ರಜಾಗಣವನ್ನು ಕಟಕನಿಗೆ ಕುರಿಯನ್ನು ದಾನಕೊಟ್ಟಂತೆ, ನವಾಬನ ಯುದ್ಧವಿಶಾರದ ಸೈನ್ಯದ ಎದುರಿಗೆ ನಿಲ್ಲಹಚ್ಚುವದು ಆ ಪ್ರಜಾವತ್ಸಲ, ಲೋಕಮಾನ್ಯ ಹಾಗು ಹಿಂದೂ-ಮುಸಲ್ಮಾನರನ್ನು ಅಂತರಂಗದ ಸಮಭಾವದಿಂದ ಪಾಲಿಸುವ ಪ್ರಭುವಿನ ಮನಸ್ಸಿಗೆ ಸರಿದೋರೀತೇ? ಎಷ್ಟೋ ಪರಿಯಿಂದ ವಿಚಾರಿಸಿದರೂ ಅವನಿಗೆ ಆ ನಿಕರದ ಸಮಯದಲ್ಲಿ ಯೋಗ್ಯ ಮಾರ್ಗವು ತೋಚದಾಯಿತು. ಕಟ್ಟ ಕಡೆಗೆ ಅವನು ನಿರ್ಧರಿಸಿದ್ದೇನಂದರೆ, ತನ್ನ ಪ್ರಬುದ್ಧ ಮಗನೊಡನೆ ತನ್ನ ಪರಿವಾರವನ್ನು ಮಾನಸಿಂಹರಾಜನ ಆಶ್ರಯಕ್ಕೆ ಕಳಿಸಿಕೊಡಬೇಕು; ಮತ್ತು ತಾನು ಫಕೀರನಾಗಿ ಮಾಯೆಯನ್ನು ಸಂಗಡ ಕರೆದುಕೊಂಡು ದೇಶಾಂತರದಲ್ಲಿಯ ತೀರ್ಥಕ್ಷೇತ್ರಗಳಿಗೆ ಹೊರಟು ಹೋಗಬೇಕು.

ತನ್ನ ಈ ನಿರ್ಧಾರದಂತೆ ಗುಲಾಮ ಅಲಿಯು ಮರುದಿನವೇ ವ್ಯವಸ್ಥೆ ಮಾಡಹತ್ತಿದನು. ಈ ಸಂಗತಿ ಮಾಯೆಗೆ ತಿಳಿಯಲು, ಅವಳು ಕೆಲ ಕಾಲದವರೆಗೆ ನೀರವ ಮುಖದಿಂದ ಆಲೋಚಿಸಿದಳು. ನಂತರ ಅವಳು ಲಗುಬಗೆಯಿಂದ ಗುಲಾಮ ಅಲಿಯ ಬಳಿಗೆ ಬಂದು:-ಜಹಗೀರದಾರರೇ, ಇದೆಂಥ ಸ್ತುತ್ಯ ಉದ್ಯೋಗ ಕೈಕೊಂಡಿರಲ್ಲ! ಥೂ, ನಿಮ್ಮ ಗಳಿಕೆಗೆ ಬೆಂಕಿಹಚ್ಚಲಿ!! ಕಟ್ಟಕಡೆಗೆ ನಿಮ್ಮ ಮನಸ್ಸಿಗೆ ಇದೇ ಈ ಓಡಿ ಹೋಗುವ ಮಾರ್ಗವೇ ಸರಿದೋರಿತೆ? ಆ ಕ್ಷೇತ್ರ-ತೀರ್ಥಗಳು ಪೂಜ್ಯಪಾದರಾದ ನಿಮ್ಮ ಅಜ್ಜ-ಮುತ್ತಜ್ಜಂದಿರ ಪವಿತ್ರ ವಾಸಸ್ಥಳಗಳಾಗಿದ್ದ ಈ ವಾಡೆ, ಈ ಜಹಗೀರುಗಳಿಗಿಂತ ಹೆಚ್ಚು ಪವಿತ್ರವಲ್ಲೆಂಬದು ನಿಮಗೆ ಹೇಗೆ ವಿಸ್ಮರಣವಾಯಿತು? ಈ ಪವಿತ್ರ ಪುಣ್ಯಪ್ರದ ಕ್ಷೇತ್ರ-ತಿರ್ಥಗಳನ್ನು ನಿರಾಯಾಸವಾಗಿ ಶತ್ರುಗಳ ಸ್ವಾಧೀನಪಡಿಸಿ, ಅವೆಂಥ ಬೇರೆ ತೀರ್ಥ-ಕ್ಷೇತ್ರಗಳನ್ನು ನೀವು ಹುಡುಕಹತ್ತುವಿರಿ? ಜಹಗೀರದಾರರೇ, ನಮ್ಮ ಈ ಮಹಾಮಾಯೆಯ ಮಂದಿರವನ್ನು—ನಮ್ಮಗಳ ಜೀವನ ಸರ್ವಸ್ವದ ಮಹಾತೀರ್ಥವನ್ನು—ಶತ್ರುಗಳ ಅಪಘಾತದಿಂದ ಭಂಗವಾಗುವದಕ್ಕಾಗಿಟ್ಟು ಬಿಟ್ಟು, ಜೀವವುಳಿಸಿ ಪಾರಾಗಿ ಹೋಗಬೇಕೆಂದಿರುವ ನಿಮ್ಮ ಬಾಳಿಗೆ ಬೆಂಕೀ ಹಚ್ಚಲಿ! ಆಗದು, ಜಹಗೀರದಾರರೇ, ನನ್ನಿಂದ ಅದೆಂದೂ ಆಗದು. ಮಹಾಮಾಯೆಯ ಮಂಟಪದಲ್ಲಿಯೇ ನಾನು ನನ್ನ ದೇಹಪತನಗೊಳಿಸೇನು, ನನ್ನ ರಕ್ತದಿಂಧ

ಮಹಾಮಾಯೆಯು ಈ ಮಂದಿರವನ್ನು ಸಾರಿಸೇನು; ಆದರೆ ಚಂಡಿಮಂಟಪ ವನ್ನು ಮಾತ್ರ ನಾನು ಪ್ರಾಣವಿರುವವರೆಗೂ ಬಿಟ್ಟು ಹೊರಹೊರಡಲಿಕ್ಕಿಲ್ಲ!

"ತಂಗಿ, ಮಹಾಮಾಯೆಯು ಈ ನಿನ್ನ ಮಂದಿರದಲ್ಲಷ್ಟೇ ವಾಸಿಸುವ ಳೆಂದು ನಿನ್ನ ಭಾವನೆಯಾಗಿದೆಯೇನು? ಈ ವಿಶ್ವವಲಯದ ತುಂಬೆಲ್ಲ ಮಹಾ ಮಾಯೆಯು ವ್ಯಾಪಿಸಿರುತ್ತಾಳೆ. ಎಲ್ಲಿ ಹೋಗುವಿಯೋ, ಎಲ್ಲಿ ನೋಡುವಿ-ಯೋ, ಎಲ್ಲಿ ಆಕೆಯ ನಾಮಸ್ಮರಣ ಮಾಡುವಿಯೋ ಅಲ್ಲಿ ಆ ಮಹಾಮಾಯೆ ಯು ಕಾಣಿಸಿಕೊಳ್ಳುತ್ತಾಳೆ; ಮತ್ತು ನೀನು ಯಾವ ಸ್ಥಳದಲ್ಲಿ ಆ ಮಹಾ ಮಾಯೆಯ ಸೇವೆ ಮಾಡುವೆಯೋ ಅದೇ ನಿನಗೆ ಪವಿತ್ರ ತೀರ್ಥವಾಗುವದು. ಹೀಗಿರುತ್ತಿರಲಿಕ್ಕೆ ನಾವು ನಮ್ಮಗಳ ರಕ್ತದಿಂದ ಈ ಪವಿತ್ರತೀರ್ಥವನ್ನು ಅಪ ವಿತ್ರಗೊಳಿಸಬಹುದೆ? ತಂಗೀ, ಮಾಡುವದೇನು? ನಾವು ಇಲ್ಲಿ ವಾಸಿಸಿರಬಾರ ದೆಂದೇ ದೇವರ ಇಚ್ಛೆಯಿದ್ದಂತೆ ಕಾಣುತ್ತದೆ. ದೇವರು ನಮ್ಮನ್ನು ಈ ಸ್ಥಾನ ದಿಂದ ಬಿಡಿಸಿದರೂ ಅಡ್ಡಿಯಿಲ್ಲ; ನಾವು ಮಾತ್ರ ಅವನನ್ನು ನಮ್ಮ ಹೃದಯ ದಿಂದ ಬಿಡುವಂತಿರುವದಿಲ್ಲ. ಆದ್ದರಿಂದ ತಂಗಿ, ನಾವು ಬೇಕಂತ ಆ ದುಷ್ಟ ನವಾಬನ ಸಿಟ್ಟಿಗೀಡಾಗಬಾರದು; ಬೇರೆ ಸುರಕ್ಷಿತ ಸ್ಥಳಕ್ಕೆ ಹೋಗಿ ಆ ದಯಾಘನ ಜಗನ್ನಾಯಕನನ್ನು ಆರಾಧಿಸೋಣ, ನಡೆ."

ಗುಲಾಮ ಆಲಿಯ ಈ ನಿರಾಶೆಯ, ಹೇಡಿತನದ ಉದ್ಗಾರಗಳನ್ನು ಕೇಳಿ ಮಾಯೆಯು ಸ್ಫೂರ್ತಿಯಿಂದ ನುಡಿದಳೇನಂದರೆ:-"ಜಹಗೀರದಾರರೇ, ಕಾಲ ತ್ರಯದಲ್ಲಿಯೂ ನನ್ನಿಂದ ಈ ಸ್ಥಾನವನ್ನು ಬಿಟ್ಟು ಹೊರಡುವದಾಗಲಿಕ್ಕಿಲ್ಲ. ನಮ್ಮನ್ನು ಈ ಸ್ಥಾನದಿಂದ ಹೊರಡಿಸಬೇಕೆಂದೂ ದೇವರ ಇಚ್ಛೆಯಿರುವ ದಿಲ್ಲ. ಆ ಪ್ರೇರಣೆ ನಿಮಗೆ ದೇವರಿಂದ ಆಗಿರದೆ, ಸೈತಾನನಿಂದಾದಂತೆ ತೋರುತ್ತದೆ; ನಿಮ್ಮ ಅಂತರಂಗದಲ್ಲಿ ನಿಜವಾಗಿ ದೇವರು ವಾಸ್ತವ ಮಾಡಿ ದ್ದರೆ, ನೀವು ಆ ಸೈತಾನನ ಪ್ರೇರಣೆಗೆ ಎಂದಾದರೂ ಕಿವಿಗೊಡುತ್ತಿದ್ದಿರೊ ? ನಮ್ಮ ಮಹಾಮಾಯೆಯು ಜಗದ್ವ್ಯಾಪಿನಿಯಾಗಿರುವದರಿಂದ, ಹೋದಲ್ಲಿ-ಬಂದಲ್ಲಿ ಇವಳು ಇದ್ದೇ ಇರುತ್ತಾಳೆಂಬದು ಸತ್ಯವು; ಆದರೆ ಈ ಮಹಾ ಮಾಯೆಯು ನನಗೆ ಪ್ರಥಮತಃ ಇದೇ ಈ ಚಂಡಿಮಂಟಪದಲ್ಲಿ ಸಾಕ್ಷಾ ತ್ಕಾರವಿತ್ತಿರುವಳು- ನಾನು ಈ ಮಂದಿರದಲ್ಲಿ ಇವಳನ್ನು ಆರಾಧಿಸಹತ್ತಿ ಇವಳ ಸೇವೆಯಿಂದ ಧನ್ಯಳಾಗಿರುವೆನು. ಆದ್ದರಿಂದ ಈ ಮಂದಿರವೇ ನನ್ನ ಜೀವನದ ಮೊದಲನೇ ಮಹಾತೀರ್ಥವಾಗಿರುತ್ತದೆ; ಮತ್ತು ಮಹಾ

ಮಾಯೆಯು ಸ್ವತಃ ನನ್ನನ್ನು ಬೇರೆ ಕಡೆಗೆ ಎಳೆದೊಯ್ಯುವ ವರೆಗೆ ನಾನು ಈ ಮಹಾಸ್ಥಾನದಿಂದ ಸರ್ವಥಾ ಹೊರಹೊರಡಲಾರೆನು; ಆದರೆ ಪ್ರಸ್ತುತ ದಲ್ಲಿ ದೇವಿಯು ನನಗೆ ಇಲ್ಲಿಂದ ಹೊರಟು ಹೋಗಲು ಯಾವ ಬಗೆಯಿಂದ-ಲೂ ಆಜ್ಞಾಪಿಸಿರುವದಿಲ್ಲ. ಅಂದ ಬಳಿಕ ಈಗ ಇಲ್ಲಿ ಈ ಮಹಾದೇವಿ ಯನ್ನು ಶತ್ರುಗಳ ಪದಾಘಾತಕ್ಕೀಡು ಮಾಡಿ, ನಾವು ಬೇರೆ ಕಡೆಗೆ ಹೋಗು ವದು ಜಹಗೀರದಾರರೇ, ನನ್ನಂಥ ದೀನ ಅಬಲೆಗೆ ಕೂಡ ಶಕ್ಯವಾಗಿರುವ ದಿಲ್ಲ. ಜಹಗೀರದಾರರೇ, ನೀವು ತೇಜಸ್ವಿಗಳಾದ ವೀರರು; ಎಷ್ಟೋ ಕಾಳಗ ಗಳನ್ನು ಮಾಡಿದವರು. ಹೀಗಿದ್ದು, ಇಂದು ನೀವಿಂಥ ಹೇಡಿ ವಿಚಾರಗಳಿ ಗೇಕೆ ಮರುಳಾಗಿರುತ್ತೀರಿ? ಎರಡನೆಯವರ ಸಲುವಾಗಿ ಎಷ್ಟೋ ಯುದ್ಧ ಗಳನ್ನು ಮಾಡಿದ ನೀವು, ಸ್ವಂತದ ಪೂಜ್ಯ-ಪಿತೃಭೂಮಿಯ ಸಂರಕ್ಷಣೆಗಾಗಿ ಒಂದು ಸಾರೆಯಾದರೂ ಕಾಳಗ ಮಾಡಬೇಕೆನ್ನುವ ಬುದ್ಧಿಯು ನಿಮ್ಮಲ್ಲಿ ಏಕೆ ಹುಟ್ಟಲೊಲ್ಲದು?''

"ತಂಗೀ, ನಾನು ಕಾಳಗಕ್ಕೆ ಹೆದರುವೆನೆ? ಆದರೆ ಮಾಡಲೇನು? ನನ್ನ ದಂಡು ಅತ್ಯಲ್ಪವಾಗಿದ್ದುದರಿಂದ, ನವಾಬನ ಅಗಣಿತ ಸೈನ್ಯದ ಎದುರಿಗೆ ನನ್ನ ದಾಡೇನು? ಇನ್ನು ಶತ್ರುಗಳಿಗೆ ಬೆನ್ನು ತೋರಿಸದೆ ನಾನು ಸಾಯುವವರೆಗೆ ಕಾದಿ ಸತ್ತರೂ ಸಾಯಬಹುದು; ಆದರೆ ತಂಗೀ, ನಿನ್ನ ಗತಿಯೇನು? ನಿನ್ನನ್ನು ಸಂರಕ್ಷಿಸುವದನ್ನು-ನನ್ನ ಇಮಾನವನ್ನು ಕಾಯುವದನ್ನು-ಬಿಟ್ಟುಗೊಟ್ಟು, ವೃಥಾ ಕಾದಿ ಸಾಯುವದರಿಂದ ಪ್ರಯೋಜನವೇನು? ಇನ್ನು ನೀನೂ ನಾನೂ ಕೂಡಿಯೇ ಸಮರಾಂಗಣದಲ್ಲಿ ವೈರಿಗಳಿಗೆದುರಾಗಿ ದೇಹಗಳನ್ನು ತ್ಯಜಿಸಿದರೂ ಈ ನಮ್ಮ ತೀರ್ಥಗಳು ಕಡೆಗೆ ವೈರಿಗಳಿಂದ ಭ್ರಷ್ಟವಾಗದೆ ಹೇಗುಳಿದಾವು?"

"ಜಹಗೀರದಾರರೇ, ನನ್ನನ್ನು ಸಂರಕ್ಷಿಸುವದಕ್ಕಾಗಿ-ಇಮಾನವನ್ನು ಕಾಯುವದಕ್ಕಾಗಿ-ನೀವಿಂಥ ಹೇಡಿ ಮಾರ್ಗವನ್ನು ಹಿಡಿಯುವದು ನನಗೆ ಸರ್ವಥಾ ಯೋಗ್ಯವೆನಿಸುವದಿಲ್ಲ. ಯಾವ ಜಗದ್ಧಾತ್ರಿಯಾದ ಮಹಾಮಾಯೆ ಯು ಪ್ರಚಂಡರಾದ ಅಗಣಿತ ದೈತ್ಯರನ್ನು ಸಂಹರಿಸಿರುವಳೋ, ಆ ಮಹಾ ಮಾಯೆಯ ಭಕ್ತಳಾದ ನಾನಾದರೂ ಆಕೆಯ ಪ್ರೇರಣೆಯ ಮೇರೆಗೆ ಖಡ್ಗ ಧಾರಣೆಯಾಗಿ ರಣಾಂಗಣದಲ್ಲಿಯ ಶತ್ರುಗಳ ರುಂಡಗಳನ್ನು ಮುಂಡದಿಂದ ಬೇರೆ ಮಾಡಬಲ್ಲೆನು. ಜಹಗೀರದಾರರೇ, ನನಗೋಸ್ಕರ ನೀವು ನಿಮ್ಮ ಪವಿತ್ರಕ್ಷಾತ್ರವೃತ್ತಿಯನ್ನು ಬಿಟ್ಟುಕೊಡಬೇಡಿರಿ. ನಡೆಯಿರಿ ಬೇಗ; ನಾವು

ಶತ್ರುಗಳಿಗೆದುರಾಗಿ ಅವರೆಲ್ಲರನ್ನು ತುಂಡು ತುಂಡಾಗಿ ಮಾಡಿ, ನಮ್ಮ ಈ ಮಹಾತೀರ್ಥ-ಕ್ಷೇತ್ರಗಳನ್ನು ಸಂರಕ್ಷಿಸಿಕೊಳ್ಳೋಣ!"

ಮಾಯೆಯ ಈ ವೀರರಿಗುಚಿತವಾದ ವಾಣಿಯನ್ನು ಕೇಳಿ ಚಿಂತೆಯಿಂದ ಅವಸಾನಗೆಟ್ಟ ಗುಲಾಮ ಅಲಿಯ ಹೃದಯವು ತುಸ ಉತ್ತೇಜಿತವಾಯಿತು. ಇದುವರೆಗೆ ಮಾಯಾ-ಸ್ನೇಹದಿಂದ ಅಶ್ರುಸಿಕ್ತವಾದ ಅವನ ಎರಡೂ ಕಣ್ಣುಗಳು ಸ್ವಾಭಾವಿಕವಾದ ವೀರಗೌರವ ತೇಜದಿಂದ ಮಿನುಗಹತ್ತಿದವು. ಆಗ ಅವನು ತನ್ನ ವೀರಗಂಭೀರ ದೃಷ್ಟಿಯಿಂದ ಮಾಯೆಯ ಕಡೆಗೆ ನೋಡುತ್ತಿರಲು,

ಮಾಯೆಯು:—"ಜಹಗೀರದಾರರೇ, ನಿಮ್ಮ ದಂಡು ಅತ್ಯಲ್ಪವಿರುವದೇನೋ ನಿಜವು; ಆದರೆ ನಿಮ್ಮ ಜಹಗೀರಿನಲ್ಲಿ ಲಕ್ಷಾವಧಿ ಗಂಡಸರು ವಾಸಿಸುತ್ತಿರುವಂಪ್ಟೆ? ಎಷ್ಟೋ ಪ್ರಸಂಗಗಳಲ್ಲಿ ನೀವು ಅವರ ಕಷ್ಟಗಳನ್ನು ಅವರ ಗುಲಾಮರಂತೆ ನಡೆದು ನಿವಾರಣ ಮಾಡಿರುತ್ತೀರಿ. ಆದ್ದರಿಂದ ಈ ನಿಕರದ ಪ್ರಸಂಗದಲ್ಲಿ ಅವರು ನಿಮ್ಮ ಗುಲಾಮರಾಗಿ-ದಂಡಾಳುಗಳಾಗಿ ನಿಮ್ಮನ್ನು ಈ ಸಂಕಟದಿಂದ ಮುಕ್ತರಾಗಮಾಡಲಿಕ್ಕಿಲ್ಲೇನು? ಅವಶ್ಯವಾಗಿ ಮಾಡುವರು. ನೀವು ಕರೆದರೆ ಅಥವಾ ನಾನು ಕರೆದರೆ, ಈಗಿಂದೀಗಲೆ ಲಕ್ಷಗಟ್ಟಲೆ ಜನರು ಓಡುತ್ತ ಬಂದು ನಿಮ್ಮ ಸಂಕಟನಿವಾರಣಕ್ಕೆ ಸಹಾಯಕರಾಗುವರು. ನಬಾಬನ ದಂಡು ಇರುವದಾದರೂ ಎಷ್ಟು? ಎಷ್ಟೆಂದರೂ ಅವನ ದಂಡಿನವರು ಸಂಬಳದ ಆಳುಗಳು! ಅವರು ಜೀವದ ಹಂಗುದೊರೆದು ಕಾದುವ ನಮ್ಮ ನಿಸ್ಪೃಹ ಸೇವಕರ ಮುಂದೆ ಎಷ್ಟು ಹೊತ್ತು ನಿಂತಾರು? ನಮ್ಮವರ ಹೊಡೆತದಿಂದ ತುಸ ಹೊತ್ತಿನಲ್ಲಿಯೇ ಆ ದಂಡು ದಾರಿಸಿಕ್ಕತ್ತ ಪಲಾಯನ ಮಾಡಬಹುದು ಆದ್ದರಿಂದ ಜಹಗೀರದಾರರೇ, ಮುಂದಿನ ಯಾವ ಸಂಕಟಕ್ಕೂ ಹೆದರದೆ, ಮನಸ್ಸಿನಲ್ಲಿ ಇಲ್ಲದ ಕುಕಲ್ಪನೆಯನ್ನು ತರದೆ, ನಿಮ್ಮ ಈ ರಾಮರಾಜ್ಯವನ್ನು ರಕ್ಷಿಸುವದಕ್ಕಾಗಿ ನೀವು ನಿಮ್ಮ ಪ್ರೇಮಲ ಪ್ರಜೆಗಳನ್ನು ಕೂಗಿರಿ. ಬರಿಯ ಒಬ್ಬ ನವಾಬನೇ ಏಕೆ, ಸ್ವತಃ ! ಚಕ್ರವರ್ತಿ ಬಾದಶಹ ನಿಮಗಿದಿರಾದರೂ, ನೀವು ನಿಮ್ಮ ಈ ಜೀವಕ್ಕೆ ಜೀವಕೊಡುವ ಪ್ರಜೆಗಳ ಸಹಾಯದಿಂದ ಅವನನ್ನು ನಿಶ್ಚಯವಾಗಿಯೂ ಸೋಲಿಸುವಿರಿ."

ಮಾಯೆಯ ಈ ಸುಸಾಧ್ಯವಾದ ಆಲೋಚನೆಯನ್ನು ಕೇಳಿ ಗುಲಾಮ ಅಲಿಯು ಒಂದು ದೀರ್ಘವಾದ ಉಸಿರುಗರೆದನು. ನಂತರ ಅವನು ಸಾವಕಾಶವಾಗಿ ನುಡಿದದ್ದೇನಂದರೆ:-"ತಂಗೀ, ನೀನನ್ನು ವಮಾತು ನನಗೆ ಸಮ್ಮತ

ವಾಗಿದೆ. ನಾವು ಕರೆದರೆ ಈಗಲೆ ಲಕ್ಷಾವಧಿ ಜನರು ಬಂದು ನಮ್ಮನ್ನು ಸೇರ ಬಹುದು; ಆದರೆ ಬರಿಯ ಸಂಖ್ಯೆಯಿಂದ ದಂಡು ಹೆಚ್ಚಾದ ಮಾತ್ರದಿಂದ ಜಯವು ಎಂದಿಗೂ ಪ್ರಾಪ್ತವಾಗಲರಿಯದು. ದಂಡಾಳುಗಳಿಗೆ ಯುದ್ಧದ ಶಿಕ್ಷಣ ದೊರೆತಿರಬೇಕು; ಶಸ್ತ್ರಾಸ್ತ್ರಗಳೂ ತೋಫುಗಳೂ ಬೇಕು; ಆದರೆ ಅವೆಲ್ಲ ಸಾಧನಗಳು ಈ ಅಯುತ ಸಮಯದಲ್ಲಿ ನಮಗೆ ಹೇಗೆ ಪ್ರಾಪ್ತವಾಗ ಬೇಕು? ನಮ್ಮ ಪ್ರಜೆಗಳು ನಮ್ಮ ಸಹಾಯಕ್ಕೆ ಬಂದರೂ ಈ ಅಶಿಕ್ಷಿತ ಜನರು ನವಾಬನ ಯುದ್ಧವಿಶಾರದ ಜನರಿಂದ ಊರವ್ವನ ಜಾತ್ರೆಯೊಳಗಿನ ಕೋಣ ನಂತೆ ಗತಿಹೊಂದಬೇಕಾಗುವದು. ನಮ್ಮ ಈ ತೀರ್ಥ-ಕ್ಷೇತ್ರಗಳು ನಮಗೆ ಅತ್ಯಂತ ಪ್ರಿಯವಾಗಿರುತ್ತವೆಂಬದರಲ್ಲಿ ಸಂಶಯವಿಲ್ಲ: ಆದರೆ ಅವುಗಳನ್ನು ರಕ್ಷಿಸುವ ಹವ್ಯಾಸಕ್ಕಾಗಿ ಈ ನಮ್ಮ ಲಕ್ಷಾವಧಿ ನಿರಪರಾಧಿ ಪ್ರಜೆಗಳನ್ನು ಬಲಿಕೊಡುವದು ಎಲ್ಲಿಯ ನ್ಯಾಯ? ಹಾಗು ನಾನು ಪ್ರಜಾಪಾಲಕನಿದ್ದರೂ ಅವರನ್ನು ಬಲಿಕೊಡಲಿಕ್ಕೆ ನನಗೆಲ್ಲಿ ಅಧಿಕಾರವಿರುತ್ತದೆ?"

"ಜಹಗೀರದಾರರೇ, ಈ ಅಧಿಕಾರ ನಿಮಗಿರದಿದ್ದರೂ, ನಿಮಗಾಗಿ ತಮ್ಮ ಪ್ರಾಣಗಳನ್ನು ಬಲಿಕೊಡುವ ಅಧಿಕಾರ ನಿಮ್ಮ ಪ್ರಜೆಗಳಿಗಿದ್ದೇ ಇದೆ; ಯಾಕಂದರೆ, ನಿಮ್ಮ ಜಹಗೀರಿನ ಆಶ್ರಯದಲ್ಲಿ ಅವರು ವಂಶಪರಂಪರವಾಗಿ ಸುಖದಿಂದಿರುತ್ತಾರೆ; ಹಾಗು ಮುಂದಾದರೂ ಸುಖದಿಂದ ಕಾಲಕಳೆಯಬಹು ದಾಗಿದೆ. ನವಾಬ, ಬಾದಶಹ ಮುಂತಾದವರು ಇವರ ಪರಂಪರೆಯ ಪಾಲಕ ರಾಗಿದ್ದರೂ, ಅವರು ನಿಜವಾಗಿ ಇವರ ಪಾಲನಕರ್ತರಲ್ಲ; ನೀವೇ ಇವರ ರಾಜರು. ರಾಜನಿದ್ದುದರಿಂದಲೇ ಪ್ರಜೆಗಳು ಸುಖದಿಂದ ಇರುತ್ತಾರೆ. ಅದ್ದ ರಿಂದ ತಮ್ಮ ಪ್ರಾಣವನ್ನು ಸಹ ಕೊಟ್ಟು ರಾಜನನ್ನು ರಕ್ಷಿಸುವ ಧರ್ಮ ಪ್ರಜೆಗಳದಾಗಿರುತ್ತದೆ. ಜಹಗೀರದಾರರೇ, ನೀವು ಗುಲಾಮಅಲಿಯೆಂದೊಬ್ಬ ವ್ಯಕ್ತಿಯಿದ್ದು, ನಿಮ್ಮರಕ್ಷಣದ ಸಲುವಾಗಿ ನೀವು ಈ ಪ್ರಜೆಗಳನ್ನು ಕರೆಯುತ್ತಿ ರುವಿರೆಂದು ತಿಳಿಯಬೇಡಿರಿ. ನಿಮ್ಮ ರಾಜಶಾಸನ ಧರ್ಮವನ್ನು ಕಾಯುವ ದಕ್ಕಾಗಿಯೇ ಅಂದರೆ, ಸ್ವಂತದ ಹಿತಸಾಧನೆಗಾಗಿಯೇ ಇವರು ಪ್ರಸ್ತುತ ರಣರಂಗಕ್ಕೆ ಆಹುತಿಯಾಗುವರು; ನಿಮಗೆಂದು ಖಂಡಿತವಾಗಿ ಆಗುವದಿಲ್ಲ. ನೀವು ನಿಮ್ಮೊಬ್ಬರ ಇಮಾನ ಕಾಯುವದಕ್ಕಾಗಿ ಈ ದುರ್ಧರ ಪ್ರಸಂಗವನ್ನು ತಂದುಕೊಂಡಿರಲು, ನಿಮ್ಮ ಪ್ರಜೆಗಳು ತಮ್ಮ ಇಮಾನ ಕಾಯ್ದುಕೊಳ್ಳುವ ದಕ್ಕಾಗಿ ನಿಮ್ಮದಂಡಿನಲ್ಲಿ ಸೇರಿ,ನಿಮಗೆ ಈ ಪ್ರಸಂಗದಲ್ಲಿ ಸಹಾಯಮಾಡಲಿ.

ಕೆಲಹೊತ್ತಿನವರೆಗೆ ಗುಲಾಮು ಅಲಿಯಿಂದ ದಾಯಿಗೆ ಎದುರುತ್ತರ ಕೊಡುವದಾಗಲಿಲ್ಲ. ನಂತರ ಅವನು:—ತಂಗೀ, ಎಂಥ ಜಾಣಳು ನೀನು? ನಿನ್ನ ಸಮಯೋಚಿತ ಸಲಹೆಯಿಂದ ನನ್ನಲ್ಲಿಯ ಭ್ರಾಂತಯುಡಗಿಹೋಯಿತು. ಯಾವ ದಿವಸ ನಿನ್ನ ಅಜ್ಜನು ಮರಣೋನ್ಮುಖನಾಗಿ ನಿನ್ನನ್ನು ರಕ್ಷಿಸುವ ವಿಷಯುವಾಗಿ ನನಗೆ ಅಪ್ಪಣೆ ಮಾಡಿದ್ದನೋ, ಅಂದೇ ನನ್ನ ಬಾಯಿಂದ "ಈ ಮಾಯೆಯು ನನ್ನಂಥ ಎಷ್ಟೋ ಗುಲಾಮರನ್ನು ರಕ್ಷಿಸಬಲ್ಲಳೆ"ಂದು ಆಕಸ್ಮಿಕವಾಗಿ ಹೊರಟಿದ್ದ ವಾಕ್ಯವು ಇಂದು ದಿಟವಾಯಿತು!



# (೭)

ಲೋಕಮಾನ್ಯರಾದ ಗುಲಾಮ ಅಲಿ ಹಾಗು ಮಾಯೆಯ ಆಹ್ವಾನಕ್ಕನುಸರಿಸಿ ಜಹಗೀರಿನೊಳಗಿನ ಶಸ್ತ್ರಹಿಡಿಯಲು ಶಕ್ತರಾದ ಎಲ್ಲ ಗಂಡಸರೂ ತಮ್ಮ ಮನೆಯಲ್ಲಿದ್ದ ಬಿದ್ದ ಶಸ್ತ್ರಗಳನ್ನು ತಕ್ಕೊಂಡು ಬಂದು ದಂಡಿನಲ್ಲಿ ಸೇರಿದರು. ಆ ಜಹಗೀರಿನೊಳಗಿನ ಎಲ್ಲ ಬಡಿಗ-ಕಮ್ಮಾರರು ಹಗಲಿರಳು ಗಳೆನ್ನದೆ-ಶಸ್ತ್ರಾಸ್ತ್ರಗಳನ್ನು ಮಾಡತೊಡಗಿದರು. ಜಹಗೀರದಾರನ ಈ ಸಂಪೂರ್ಣಸಿದ್ಧತೆಯ ಸುದ್ಧಿಕೇಳಿ ನವಾಬನ ದಂಡು ಮುಂದರಿಯುದಾಯಿತು ಅದು ಬಂದ ದಾರಿಯಿಂದಲೇ ಪಲಾಯನ ಹೇಳಿಸಿತು! ಹೀಗೆ ಗುಲಾಮನಿಗೆ ಮಾಯೆಯ ಸಹಾಯದಿಂದ ಒಂದು ಹನಿ ಕೂಡ ರಕ್ತಸ್ರಾವವಾಗದಂತೆ ವಿಜಯ ಪ್ರಾಪ್ತವಾಯಿತು!

ಇತ್ತ ಗುಲಾಮ ಅಲಿಯು ಜಯಭೇರಿಯನ್ನು ಹೊಡಿಸುತ್ತ ನಗರವನ್ನು ಪ್ರವೇಶಿಸುತ್ತಿರಲು, ಅತ್ತ ದಿಲ್ಲಿಯಿಂದ ಬರುತ್ತಿದ್ದ ಮಾನಸಿಂಗನು ದುರಾತ್ಮನಾದ ಮಹೀದಖಾನನ ದಂಡನ್ನು ನುಗ್ಗು ಮಾಡಿ, ಬಂಗಾಲ ಪ್ರಾಂತವನ್ನು ಆಕ್ರಮಿಸಿದನು. ಮಾನಸಿಂಹನಿಗೆ ಈ ಲೋಕಮಾನ್ಯ-ಹಿಂದೂ-ಮುಸಲ್ಮಾನರನ್ನು ಐಕ್ಯಭಾವದಿಂದ ನಡೆಸಿಕೊಳ್ಳುವ-ಗುಲಾಮ ಅಲಿಯ ನಿಸ್ಪೃಹ ವರ್ತನ ತಿಳಿಯಲು, ಅವನು ಇವನ ಇಡಿ ಜಹಗೀರನ್ನು ಇವನಿಗೇ ಬಿಟ್ಟು ಕೊಟ್ಟನು.

ಯಾವನು ಧರ್ಮವನ್ನು ರಕ್ಷಿಸುವನೋ ಅದು ಅವನನ್ನು ತಪ್ಪದೇ ರಕ್ಷಿಸುವದು.

---

## ಸಂಪೂರ್ಣ